# ತೊರವೆ ರಾಮಾಯಣ

## ಬಾಲಕಾಂಡ

ಸಂಧಿಗಳು

೧—೮

ಮೈಸೂರು ಹೈಸ್ಕೂಲು ೪—೫ ನೆಯ ಫಾರಮ್ಮುಗಳಿಗೆ

ನಿಯಮಿತವಾದ ಪದ್ಯಭಾಗ



ನಾಲ್ಕನೆಯ ಫಾರಮ್ಮಿಗೆ ೧೯೨೦—೧೯೨೧ ಕ್ಕೆ

ಸಂಧಿಗಳು—೧ ರಿಂದ ೩

ಪುಟ ೧—೨೬



ಐದನೆಯ ಫಾರಮ್ಮಿಗೆ ೧೯೨೧—೧೯೨೨ ಕ್ಕೆ

ಸಂಧಿಗಳು ೪ ರಿಂದ ೮

ಪುಟ ೨೭—೪೮





ಕರ್ಣಾಟಕ ಸಾಹಿತ್ಯ ಪರಿಷತ್ತು

ಬೆಂಗಳೂರು

೧೯೨೦

[ಬೆಲೆ ೧೦ ಆಣೆ

ಪವರ್ ಪ್ರೆ...



# ತೊರವೆ ರಾಮಾಯಣ

## ಬಾಲಕಾಂಡ

ಸಂಧಿಗಳು

೧—೮

ಮೈಸೂರು ಹೈಸ್ಕೂಲು ೪—೫ ನೆಯ ಫಾರಮ್ಮುಗಳಿಗೆ

ನಿಯಮಿತವಾದ ಪದ್ಯಭಾಗ



ನಾಲ್ಕನೆಯ ಫಾರಮ್ಮಿಗೆ ೧೯೨೦—೧೯೨೧ ಕ್ಕೆ

ಸಂಧಿಗಳು—೧ ರಿಂದ ೩

ಪುಟ ೧—೨೬



ಐದನೆಯ ಫಾರಮ್ಮಿಗೆ ೧೯೨೧—೧೯೨೨ ಕ್ಕೆ

ಸಂಧಿಗಳು ೪ ರಿಂದ

ಪುಟ ೨೭—೪೯





ಕರ್ಣಾಟಕ ಸಾಹಿತ್ಯ ಪರಿಷತ್ತು

ಬೆಂಗಳೂರು

೧೯೨೦

[ ಬೆಲೆ ೧೦ ಆಣೆ

ಪವರ್ ಪ್ರೆ


AKSHARA GRANTHALAYA
ACC.NO. 111270

ಶ್ರೀಃ

# ತೊರವೆ ರಾಮಾಯಣ.

---

## ಬಾ ಲ ಕಾಂ ಡ

### ಮೊದಲನೆಯ ಸಂಧಿ.

[* ಎಂಬುದು ಶಿಥಿಲೋಚ್ಚಾರಣೆಯನ್ನು ತೋರಿಸುತ್ತದೆ.]

ಶ್ರೀಜನಕಜಾ ರಮಣ ವಿಮಲ ಸ ।
ರೋಜಸಂಭವ ಜನಕನನುಪಮ ।
ರಾಜಶೇಖರ ವಿನುತನಖಿಲಾಮರ ಕಿರೀಟಚಯ ॥
ರಾಜಿತಾಮಲ ಲಲಿತಪದ ಪಂ ।
ಕೇಜನಾನತಜನ ದಯಾಸುರ ।
ಭೂಜ ತೊರವೆಯ ರಾಯ ನರಹರಿ ಪಾಲಿಸುಗೆ ಜಗವ ॥ ೧ ॥

ಪರಮ ಮಂಗಳಮೂರ್ತಿ ಪಾವನ ।
ಚರಿತ ಪರಮಾನಂದಮಯ ಪುರ ।
ಹರ ಪುರಂದರ ಪೂಜಿತಾಂಘ್ರಿಸರೋಜ ಶಶಿಮೌಳಿ ॥
ಶರಣಜನ ಸುರಧೇನು ಗಂಗಾ ।
ಧರ ಗಜಾಸುರಮಥನ ಗೌರೀ ।
ವರ ತ್ರಿಯಂಬಕನೊಲಿದು ಸಲಹುಗೆ ಸಕಲ ಸಜ್ಜನರ ॥ ೨ ॥

(೧) ಅನ್ವಯ-ಶ್ರೀಜನಕಜಾರಮಣ, ವಿಮಲಸರೋಜಸಂಭವಜನಕನು, ಅನುಪಮ ರಾಜಶೇಖರವಿನುತನು, ಅಖಿಲಾಮರ ಕಿರೀಟಚಯ ರಾಜಿತಾಮಲ ಲಲಿತ ಪದಪಂಕೇಜನು, ಆನತಜನ ದಯಾಸುರಭೂಜ, ತೊರವೆಯರಾಯ ನರಹರಿ ಜಗವ ಪಾಲಿಸುಗೆ; ಸರೋಜ...ಜನಕನು-ಕಮಲದಲ್ಲಿ ಹುಟ್ಟಿದವನ (ಬ್ರಹ್ಮನ) ತಂದೆ. ಕರ್ತೃ-ನರಹರಿ, ಕರ್ಮ-ಜಗವ, ಕ್ರಿಯಾಪದ-ಪಾಲಿಸುಗೆ. ಮೊದಲಿನ ೬ ಪದಗಳು ಕರ್ತೃವಿಗೆ ವಿಶೇಷಣಗಳು. ಇದು ಮಂಗಳಶ್ಲೋಕ. ಮಂಗಳದಲ್ಲಿ ಆಶೀರ್ವಾದ, ನಮಸ್ಕಾರ, ವಸ್ತುನಿರ್ದೇಶ ಎಂಬ ಮೂರು ಬಗೆಗಳಿವೆ. ಇಲ್ಲಿ ಆಶೀರ್ವಾದ ರೂಪವಾದ ಮಂಗಳವು. ಈ ಪದ್ಯದಲ್ಲಿ ಗಜ ಪ್ರಾಸವಿರುತ್ತದೆ. ಪ್ರತಿಪಾದದ ಎರಡನೆಯ ಅಕ್ಷರವು ತನ್ನ ಹಿಂದೆ ದೀರ್ಘದಿಂದ ಕೂಡಿರಬೇಕೆಂಬುದು ಗಜಪ್ರಾಸಕ್ಕೆ ಲಕ್ಷಣ.

(೨) ಅನ್ವಯ-ತ್ರಿಯಂಬಕನು ಸಕಲ ಸಜ್ಜನರ ಒಲಿದು ಸಲಹುಗೆ; ಮೊದಲಿನ ೧೦ ಪ್ರಥಮಾವಿಭಕ್ತ್ಯಂತ ಪದಗಳು ತ್ರಿಯಂಬಕನು ಎಂಬ ಕರ್ತೃಪದಕ್ಕೆ ವಿಶೇಷಣಗಳು. ಸಲಹು+ಗೆ=ಸಲಹುಗೆ, ವಿಧ್ಯಾದ್ಯರ್ಥದ "ಗೆ" ಎಂಬ ಪ್ರತ್ಯಯವು ಬಂದಿದೆ.

821.1
K2A



ಕಡಲ ಕಡೆಹದಲದುರಿ ತೆರೆಗಳ ।
ನೊಡೆದು ಮೂಡಿ ಸಮಸ್ತದೇವರ ।
ಗಡಣಗಳನರಸುತ್ತ ಕಂಡು ಜನಾರ್ದನನ ಚೆಲುವ ॥
ಬಿಡದೆ ನೋಡುತ ಸಂಭ್ರಮದಲಡಿ ।
ಗಡಿಗೆ ಸಡಗರದಿಂದ ಹರಿಯುರ ।
ದೆಡೆಯನಪ್ಪಿದ ಲಕ್ಷ್ಮಿ ಕೊಡು ನಮಗಿಷ್ಟಸಂಪದವ ॥ ೩ ॥

ಗಿರಿಜೆ ತ್ರಿ*ಜಗನ್ಮಾತೆ ದಕ್ಷನ ।
ವರಕುಮಾರಿಕೆ ಪಾಪಸಂಹರೆ ।
ಪರಮ ಮಂಗಳಮೂರ್ತಿ ಶುಭದಾಯಿಕೆಯೆ ಕಲ್ಯಾಣಿ ॥
ದುರಿತಹರೆ ಬಹುರಾಕ್ಷಸಾಂತಕೆ ।
ಹರನ ಮೋಹದ ರಾಣಿ ಮಾಹೇ ।
ಶ್ವರಿಯೆ ಕೊಡು ಕಾರುಣ್ಯದಿಂದಲಿಯಧಿಕ ಸಂಪದವ ॥ ೪ ॥

ವನರುಹಾಸನ ವಿಶ್ವಜಗತೀ । 111270 (R)
ಜನಕ ಸನಕಾದ್ಯಖಿಲ ಮುನಿಜನ ।
ವಿನುತ ವಿಬುಧವರೇಣ್ಯ ವಾಣೀವಧು ಮುಖಾಂಭೋಜ ॥
ದಿನಪ ಘನಚಾತುರ್ಯ ಚತುರಾ ।
ನನ ರಜೋಗುಣ ಲೋಕವಿಭು ಭೂ ।
ವಿನುತ ವಿಮಲವಿರಿಂಚಿ ಮಾಳ್ಕೆಮಗಧಿಕ ಸಂಪದವ ॥ ೫ ॥

(೩) ತಾತ್ಪರ್ಯ-ಕ್ಷೀರಸಮುದ್ರವನ್ನು ಕಡೆದ ಕಾಲದಲ್ಲಿ ತೆರೆಗಳ ಮಧ್ಯದಿಂದ ಹುಟ್ಟಬಂದು ದೇವತೆಗಳೆಲ್ಲರನ್ನೂ ನೋಡಿ ಯಾರನ್ನೂ ಒಪ್ಪದೆ ವಿಷ್ಣುವಿನ ರೂಪಾತಿಶಯಕ್ಕೆ ಮೆಚ್ಚಿ ಆತನ ಹೃದಯವನ್ನು ಸೇರಿದ ಲಕ್ಷ್ಮಿಯೇ ! (ನೀನು) ನಮಗೆ ಇಷ್ಟಸಿದ್ಧಿಯನ್ನುಂಟುಮಾಡು.

ಕಡೆ + ಪ = ಕಡೆಪ, ಕೃದಂತಭಾವನಾಮ; ಪಕಾರಕ್ಕೆ ಹಕಾರಾದೇಶವು ಬಂದು "ಕಡೆಹ" ಎಂದಾಯ್ತು. ಕಡೆಹದಲಿ + ಅದುರಿ = ಕಡೆಹದಲದುರಿ. ಲಕ್ಷ್ಮಿ-ಇದು ಸಂಬೋಧನಪ್ರಥಮೆ.

(೪) ಅನ್ವಯ-ಮಾಹೇಶ್ವರಿಯೆ (ನೀನು) ಕಾರುಣ್ಯದಿಂದಲಿ ಅಧಿಕಸಂಪದವ ಕೊಡು. „ಮಾಹೇಶ್ವರಿಯೇ" ಎಂಬುದಕ್ಕೆ ಮೊದಲಿನ ೧೦ ಸಂಬೋಧನಪ್ರಥಮೈಕವಚನದ ಪದಗಳು ವಿಶೇಷಣಗಳಾಗಿವೆ. ರಾಣಿ-ರಾಜ್ಞೀ (ತ್ಸ.)

(೫) ಅನ್ವಯ-ವಿಮಲ ವಿರಿಂಚಿ ನಮಗೆ ಅಧಿಕ ಸಂಪದವ ಮಾಳ್ಕೆ. ವಿಮಲ ವಿರಿಂಚಿ ಎಂಬ ಕರ್ತೃಪದಕ್ಕೆ ಮೊದಲಿನ ೧೦ ಪದಗಳೂ ವಿಶೇಷಣಗಳು. ವಾಣೀ......ದಿನಪ-ಸರಸ್ವತಿಯ ಮುಖವೆಂಬ ಕಮಲಕ್ಕೆ ಸೂರ್ಯನಂತಿರುವವನು-ಸರಸ್ವತಿಯನ್ನು ಸಂತೋಷಪಡಿಸತಕ್ಕವನು.

ಈ ಪದ್ಯದಲ್ಲಿ ಸಿಂಹಪ್ರಾಸವು. ಪ್ರತಿಪಾದದ ಎರಡನೆಯ ಅಕ್ಷರವು ತನ್ನ ಹಿಂದೆ ಹ್ರಸ್ವಾಕ್ಷರದಿಂದ ಕೂಡಿ ಬರಬೇಕೆಂಬುದೇ ಸಿಂಹಪ್ರಾಸ ಲಕ್ಷಣವು.

ಸರಸಿಜಾಂಘ್ರಿದ್ವಯದ ಕೋಮಲ ।
ತರ ಸಿತಾಂಗದ ಘನನಿತಂಬದ ।
ನಿರುಪಮಾಸ್ಯದ ನಿಮ್ನನಾಭಿಯ ನಿಬಿಡ ಕಚಭರದ ॥
ವರಕರಾಭಯ ಕರದ ಶೋಭಾ ।
ಕರದ ನಗೆಮೊಗದನುಪಮದ ಬಂ ।
ಧುರದ ಭಾರತಿ ನಿಲುಗೆ ಮನ್ಮುಖಪದ್ಮ ಸದ್ಮದಲಿ ॥ ೧ ॥

ಕರಚತುಷ್ಟಯದುದಿತ ಮದ ಸಿಂ ।
ಧುರ ನಿಭಾನನದಮಲ ಲಂಬೋ ।
ದರದ ನವ ಸಿಂದೂರ ಚಂದನ ಗಂಧ ಬಂಧುರದ ॥
ಉರು ಲಲಾಟದಿ ನರ್ತಿಸುವ ಕಚ ।
ಭರದ ಕಮನೀಯಪ್ರಭಾ ವಿ ।
ಸ್ತರ ವಿನಾಯಕ ಮಾಳ್ಕೆಮಗೆ ನಿರ್ವಿಘ್ನದಾಯತವ ॥ ೨ ॥

ಉದಧಿ ಲಂಘನ ಜನಕಜಾ ಸ ।
ನ್ಮದ ವಿವರ್ಧನ ವೈರಿಭಟ ಗಜ ।
ವಿದಳನೋದ್ಧತಸಿಂಹ ಲಂಕಾನಗರ ನಿರ್ದಹನ ॥
ಕದನಕರ್ಕಶ ಭೀಮರಿಪು ದಶ ।
ವದನ ದರ್ಪ ವಿರಾಮ ರಾಘವ ।
ಪದಸರೋಜ ಭ್ರಮರ ಭುವನಪ್ರಾಣಜಂ ವಂದೇ ॥ ೩ ॥

(೧) ಅನ್ವಯ-ಭಾರತಿ ಮನ್ಮುಖ ಪದ್ಮ ಸದ್ಮದಲಿ ನಿಲುಗೆ; ಷಷ್ಠ್ಯಂತಗಳಾದ ಮೊದಲಿನ ೧೧ ಪದಗಳು ಕರ್ತೃವಾದ ಭಾರತಿ ಎಂಬ ಪದಕ್ಕೆ ವಿಶೇಷಣವಾಗಿವೆ.

ಮನ್ಮುಖ ಪದ್ಮ (ಉಪ. ಉ.ಕರ್ಮ. ಸ) ಮನ್ಮುಖಪದ್ಮ ಸದ್ಮ (ಅವ. ಪೂರ್ವ. ಕ. ಸ.)

(೨) ಅನ್ವಯ ಕಮನೀಯ ಪ್ರಭಾವಿಸ್ತರ ವಿನಾಯಕ ಎಮಗೆ ನಿರ್ವಿಘ್ನದ ಆಯತವ ಮಾಳ್ಕೆ; ಮೊದಲಿನ ೫ ಷಷ್ಠ್ಯಂತ ಪದಗಳು ಕರ್ತೃವಿಶೇಷಣಗಳಾಗಿವೆ.

(೩) ಅನ್ವಯ-(ಅಹಂ-ನಾನು) ಉದಧಿ.........ಪ್ರಾಣಜಂ ವಂದೇ; ಇದು ಸಂಸ್ಕೃತ ವಾಕ್ಯ. ಈ ಪದ್ಯವು ಪೂರ್ತಿಯಾಗಿ-ಎಂದರೆ 'ಪ್ರಾಣಜಂ' ಎಂಬ ವರೆಗೆ ಒಂದೇ ಪದವಾಗಿದೆ. ಸಂಸ್ಕೃತ ವಾಕ್ಯವನ್ನೇ ಈ ಪದ್ಯವಾಗಿ ಉಪಯೋಗಿಸಿದ್ದಾನೆ. ಪ್ರಾಣಜಂ ಎಂಬ ವಿಶೇಷ್ಯದ ಹಿಂದಿರುವ ೬ ವಿಶೇಷಣಗಳು ಸಮಾಸದಲ್ಲಿ ಸೇರಿಕೊಂಡಿವೆ. ವೈರಿ.......ಸಿಂಹ-ಶತ್ರುಗಳ ಯೋಧರೆಂಬ ಆನೆಗಳನ್ನು ಸೀಳುವುದರಲ್ಲಿ ಸಮರ್ಥವಾದ ಸಿಂಹದಂತಿರುವ, ಕದನ.........ವಿರಾಮ-ಯುದ್ಧದಲ್ಲಿ ಕಠಿಣನಾದ ರಾವಣನ ಶೌರ್ಯವನ್ನು ನಾಶಮಾಡಿದ, ರಾಘವ.........ಭ್ರಮರ-ಶ್ರೀರಾಮನ ಪಾದಕಮಲಕ್ಕೆ ಭ್ರಮರದಂತಿರುವ-(ಶ್ರೀರಾಮಭಕ್ತನಾದ.)

ಸುರ ನರೋರಗ ವಂದ್ಯ ನಿಗವೋ ।
ತ್ಕರ ಕಲಾಪಾನಿಂದ್ಯ ವಿಶ್ವಂ ।
ಭರ ಪದಾಂಬುಜ ಭೃಂಗ ಭೂನುತ ಮುನಿಜನೋತ್ತುಂಗ ॥
ಶರಣಜನ ಪರಿಪಾಲನಾನತ ।
ಪರಿಧಿ ನಿರುಪಮ ತತ್ತ್ವವಿದ್ಯಾ ।
ಶರಧಿ ಸಲಹುಗೆ ನಮ್ಮ ಭಾರದ್ವಾಜ ಗುರುರಾಯ ॥ ೯ ॥
ಆದಿಕವಿ ಕವಿ ರಾಜಹಂಸಮ ।
ನಾದಿ ಕವಿಕುಲ ಕಮಲ ಮಿತ ಮ ।
ಹಾ ದಿವಾಕಃ ಪ್ರಚುರಭಾಷಾ ಕವಿಜನೋತ್ತಂಸ ॥
ವೇದಗರ್ಭ ವರಪ್ರಸಾದಾ ।
ಹ್ಲಾದಕವಿ ರಘುವರಕಥಾ ವಿಮ ।
ಲೋದಧೀಂದು ಮಹಾಮುನಿ ಪ್ರಾಚೇತಸಂವಂದೇ ॥ ೧೦ ॥
ಚಾರುತರ ಕರ್ಣಾಟಕದ ವಿ ।
ಸ್ತಾರ ರಾಮಾಯಣಕೆ ಕರ್ತೃ ಕು ।
ಮಾರವಾಲ್ಮೀಕಿಯೆ ಕಥಾಪತಿ ತೊರೆವೆಯಧಿನಾಥ ॥
ವೀರ ನರಹರಿಯೆನಲು ಮೆಚ್ಚದ ।
ರಾರು ಸತ್ಕವಿತಾ ವಿಲಾಸದ ।
ಸೂರಿಗಳ ಹೃದಯಾಕರುಷಣ ಕಥಾ ಕುತೂಹಲವ ॥೧೧॥

(೯) ಅನ್ವಯ-ಭಾರದ್ವಾಜ ಗುರುರಾಯ ನಮ್ಮ ಸಲಹುಗೆ. ಮೊದಲಿನ ೮ ಪ್ರಥಮಾಂತ ಪದಗಳು 'ಗುರುರಾಯ' ಎಂಬ ಕರ್ತೃವಿಗೆ ವಿಶೇಷಣಗಳು. ನಿಗಮೋತ್ಕರ ಕಲಾಪಾನಿಂದ್ಯ-ವೇದ ಸಮೂಹವೆಂಬ ಆಭರಣಗಳಿಂದ ಪ್ರಕಾಶಿಸುತ್ತಿರುವ. ವಿಶ್ವಂಭರ ಪದಾಂಬುಜಭೃಂಗ-ವಿಷ್ಣುವಿನ ಪಾದ ಕಮಲಕ್ಕೆ ತುಂಬಿಯಂತಿರುವ (ವಿಷ್ಣು ಭಕ್ತನಾದ); ಆನತಪರಿಧಿ-ನಮಸ್ಕರಿಸಲ್ಪಟ್ಟ ಜನರಿಂದ ಸುತ್ತಿದವನಾದ. ಕವಿಯು ಭಾರದ್ವಾಜಗೋತ್ರದವನಾದುದರಿಂದ ಆ ಋಷಿಯನ್ನು ಸ್ತೋತ್ರಮಾಡಿರುವನು.

(೧೦) ಅನ್ವಯ- (ಅಹಂ-ನಾನು) ಪ್ರಾಚೇತಸಂ ವಂದೇ ; ಪ್ರಾಚೇತಸ-ವಾಲ್ಮೀಕಿ. "ಅನಾದಿಕವಿ...ಪ್ರಾಚೇತಸಂ"ಎಂಬ ವರೆಗೆ ಒಂದೇ ಸಮಸ್ತಪದವು. ಈ ಪದದಲ್ಲಿ ೫ಪದಗಳು ಪ್ರಾಚೇತಸಂ ಎಂಬುದಕ್ಕೆ ವಿಶೇಷಣಗಳಾಗಿ ಸೇರಿವೆ. ಕವಿ ರಾಜಹಂಸ-ಕವಿಗಳೆಂಬ ನೀರಹಕ್ಕಿಗಳಲ್ಲಿ ಹಂಸ ಪಕ್ಷಿಯಂತಿರುವ; ದಿವಾಕಃ ಪ್ರಚುರಭಾಷಾ-ದೇವತೆಗಳಲ್ಲಿ ರೂಢಿಯಾಗಿರುವಭಾಷೆ-ದೇವಭಾಷೆ (ಸಂಸ್ಕೃತ)-ದಿವ-ಸ್ವರ್ಗವೇ, ಓಕಃ-ವಾಸಸ್ಥಾನವಾಗಿರುವವರು (ದೇವತೆಗಳು) ; ವೇದಗರ್ಭ...ಹ್ಲಾದ ಕವಿ-ಬ್ರಹ್ಮನ ವರಪ್ರಸಾದದಿಂದ ಸಂತೋಷವನ್ನು ಪಡೆದ ಕವಿ. ಹಂಸಂ + ಅನಾದಿಕವಿ = ಹಂಸಮನಾದಿಕವಿ.

(೧೧) ಭಾವಾರ್ಥ: ಈ ಕನ್ನಡದ ರಾಮಾಯಣಕ್ಕೆ ಕವಿಯು ಮಹಾಕವಿಯಾದ ಕುಮಾರವಾಲ್ಮೀಕಿ, ಕಥಾನಾಯಕನು ಶ್ರೀರಾಮನು, ಇದರ ಕವಿತ್ವವು ರಸಭರಿತವಾದುದು, ಇಂತಹ ಅತ್ಯುತ್ತಮವಾದ ಮಹಾಕಾವ್ಯವನ್ನು ಮೆಚ್ಚದೆ ಇರುವ ರಸಿಕರೊಬ್ಬರೂ ಇಲ್ಲ.

ಪರರ ಬಗೆ ಪರರುಕ್ತಿ ಪರರು ।
ತ್ಕರುಷ ಪರರುನ್ನತಿಯ ಕೃತಿಯಪ ।
ಹರಣೆ ಪರರುಪಮಾನ ಪರಸೊಡ್ಮವದ ಪರುಠವದ ॥
ಹರಹು ಹೊಗದಗ್ಗಳಿಕೆ ಪದಸಂ ।
ಚರಣೆಯಲಿ ಲಿಪಿ ತಿರುಗಿನೋಡದ ।
ಬಿರುದು ಬೇರೆ ಕುಮಾರವಾಲ್ಮೀಕಿಯ ವಚೋಲಹರಿ ॥೧೨॥

ಶುಕಕವಿಯ ಸುಮ್ಮಾನ ಸೂರಿ ।
ಪ್ರಕರದಮಲಜ್ಞಾನ ಮುನಿಕರ ।
ಮುಕುರ ಗುಣಿಗಳ ಗೂಢನಿಧಿ ರಸಿಕರ ಸುಧಾಜಲಧಿ ॥
ಅಕುಟಿಲರ ಮನಮೆಚ್ಚು ಸಿರಿಹರಿ ।
ಬಕುತರುಮ್ಮಹದಚ್ಚು ಶಿವಸೇ ।
ವಕರ ಮಚ್ಚು ಕುಮಾರ ವಾಲ್ಮೀಕಿ ಪ್ರಬಂಧ ಕೃತಿ ॥೧೩॥

ಪ್ರಿಯರಿಗಪ್ರಿಯರಿಗೆ ವಿವೇಕಾ ।
ಶ್ರಯರಿಗತಿ ಮೂರ್ಖರಿಗೆ ವಿಜ್ಞಾ ।
ನಿಯರಿಗತಿ ಜಾಣರಿಗೆ ಜಡರಿಗಸೂಯಭಾವರಿಗೆ ॥

(೧೨) ಅನ್ವಯ-ಪದಸಂಚರಣೆಯಲಿ, ಪರರ ಬಗೆ......ಹರಹು ಹೊಗದ ಅಗ್ಗಳಿಕೆ, ಲಿಪಿ ತಿರುಗಿನೋಡದ ಬಿರುದು, ಕುಮಾರ ವಾಲ್ಮೀಕಿಯ ವಚೋಲಹರಿ ಬೇರೆ ಭಾವಾರ್ಥ:-ಇತರ ಕವಿಗಳ ರೀತಿ, ಮಾತು, ಶ್ರೇಷ್ಠ ಕವಿತ್ವಗಳನ್ನು ಕದಿಯದಿರುವನು, ಇತರರು ಹೇಳಿರುವ ಉಪಮಾನಗಳು, ಶೈಲಿ ಇವುಗಳನ್ನು ಅಂಗೀಕರಿಸದಿರುವನು, ಎಂಬ ಬಿರುದುಗಳು ಕುಮಾರ ವಾಲ್ಮೀಕಿಗೆ ಬಂದಿವೆ. ಆದಕಾರಣ ಇವನ ವಾಕ್ಪ್ರವಾಹವು ಬೇರೆ, ಇತರ ಕವಿಗಳಿಗೆ ಇಂತಹ ಮಾತಿನ ಸರಣಿಯು ಲಭಿಸಲಾರದು.

(೧೩) ಭಾವಾರ್ಥ-ಕುಮಾರವಾಲ್ಮೀಕಿಯ ಈ ಕಾವ್ಯವು ನವರಸಭರಿತವಾಗಿರುವುದರಿಂದ ಮುನಿಗಳು, ದೈವಭಕ್ತರು, ವಿದ್ವಾಂಸರು, ರಸಿಕರು, ಜ್ಞಾನಿಗಳು, ಸುಜನರು ಮೊದಲಾದ ಸರ್ವರಿಗೂ ಉಪಯೋಗಕರವಾದುದು. ಪದ್ಯದಲ್ಲಿ ಮಾನ, ಜ್ಞಾನ; ನಿಧಿ, ಜಲಧಿ; ಮೆಚ್ಚು, ದಚ್ಚು, ಮಚ್ಚು ಇವುಗಳಲ್ಲಿ ಒಂದೇ ವ್ಯಂಜನಕ್ಕೆ ಆವೃತ್ತಿಯು ಬಂದಿರುವುದರಿಂದ, ವೃತ್ತ್ಯನುಪ್ರಾಸವೆಂಬ ಶಬ್ದಾಲಂಕಾರವಿದೆ. ೧, ೨ ಅಥವಾ ಹೆಚ್ಚು ವ್ಯಂಜನಗಳು ಅನೇಕಸಾರಿ ಪ್ರಯೋಗಿಸಲ್ಪಟ್ಟರೆ, ವೃತ್ತ್ಯನುಪ್ರಾಸ.

(೧೪) ಅನ್ವಯ-ಕುಮಾರವಾಲ್ಮೀಕಿಯ ಪ್ರಬಂಧ ಪ್ರೌಢತರ ಕವಿತಾಚಮತ್ಕಾರವು ಪ್ರಿಯರಿಗೆ......ಅಜ್ಞರಿಗೆ ಹರ್ಷೋದಯದ ಪೆಂಪು (ಆಗಿದೆ).

ನಯವಿದರಿಗಜ್ಞರಿಗೆ ಹರ್ಷೋ ।
ದಯದ ಪೆಂಪು ಕುಮಾರವಾಲ್ಮೀ ।
ಕಿಯ ಪ್ರಬಂಧ* ಪ್ರೌಢತರ ಕವಿತಾ ಚಮತ್ಕಾರ ॥೧೪॥

ಧರೆಯೊಳಗ್ಗದ ರಾಘವೇಂದ್ರನ ।
ಚರಿತ ಶತಕೋಟಿ ಪ್ರವಿಸ್ತರ ।
ವರ ಮಹಾಚಾರಿತ್ರ ರಚನಾ ಸುಪ್ರಬಂಧದಲಿ ॥
ಪರಮ ಭಕ್ತಿಯೊಳಾವನೊಂದ ।
ಕ್ಷರವ ಕೇಳ್ವನವಂಗೆ ಪಾತಕ ।
ಹರಿವುದೆಂದು ಕುಮಾರರಿಗೆ ವಾಲ್ಮೀಕಿಮುನಿ ನುಡಿದ ॥೧೫॥

ಭವಭವಾರ್ಜಿತ ದುರಿತಕೋಟಿಯ ।
ತವಿಸುವಗ್ಗದ ನಾಮ ಸರಸಿಜ ।
ಭವ ಭವಾಚ್ಯುತರಮಲ ಪದವಿಯನೀವ ಗುಣನಾಮ ॥
ಶಿವನ ಮೆಚ್ಚಿನ ನಾಮ ಗಿರಿಸಂ ।
ಭವೆಯ ನೇಮದ ನಾಮ ಸುರನರ ।
ಭುವನ ಪಾವನನಾಮ ಸೀತಾಪತಿಯ ಸಿರಿನಾಮ ॥೧೬॥

ರಾಮರಾಮೆಂದವನು ಸ್ವರ್ಗದ* ।
ಕಾಮಿನೀಜನಕೊಡೆಯನಹ ರಘು ।
ರಾಮ ರಕ್ಷಿಸು ರಕ್ಷಿಸೆಂದವ ಕಮಲಭವನಹನು ॥

ಭಾವಾರ್ಥ-ಕುಮಾರವಾಲ್ಮೀಕಿಯ ಕವಿತಾಚಮತ್ಕಾರವು ನಾನಾವಿಧ ಸ್ವಭಾವವುಳ್ಳ ಜನರಿಗೆಲ್ಲರಿಗೂ ಆಹ್ಲಾದಕರವಾಗಿದೆ. ಪಿರಿದು + ಪು = ಪೆಂಪು, ಪಿರಿದು ಎಂಬ ಶಬ್ದಕ್ಕೆ ಭಾವಾರ್ಥದಲ್ಲಿ ಪೆಂ ಎಂಬ ಆದೇಶವಾಗುವುದು.

ಈ ಪದ್ಯವು ವಾಲ್ಮೀಕಿರಾಮಾಯಣದ ಪೀಠಿಕೆಯಲ್ಲಿ ಹೇಳಿರುವ "ಚರಿತಂ ರಘುನಾಥಸ್ಯ ಶತಕೋಟಿ ಪ್ರವಿಸ್ತರಂ । ಏಕೈಕಮಕ್ಷರಂ ಪ್ರೋಕ್ತಂ ಮಹಾಪಾತಕನಾಶನಂ" ಎಂಬ ಶ್ಲೋಕದ ಪರಿವರ್ತನೆಯಾಗಿದೆ. ಅವಂಗೆ ಪಾತಕ ಹರಿವುದು-ಇಲ್ಲಿ ಷಷ್ಠಿಗೆ ವಿಭಕ್ತಿ ಸಲ್ಲಟದಿಂದ ಚತುರ್ಥೀವಿಭಕ್ತಿ ಬಂದಿದೆ.

(೧೬) ಭವಭವಾರ್ಜಿತ-ಇಲ್ಲಿ ವೀಪ್ಸೆಯಲ್ಲಿ ಭವ ಎಂಬ ಶಬ್ದಕ್ಕೆ ದ್ವಿರುಕ್ತಿ ಬಂದಿದೆ. ಸುರನರ ಭುವನಪಾವನನಾಮ-ದೇವತೆಗಳ ಮತ್ತು ಮನುಷ್ಯರ ಲೋಕಗಳನ್ನು ಪರಿಶುದ್ಧಮಾಡುವ ನಾಮ. ಅಚ್ಯುತರ + ಅಮಲ = ಅಚ್ಯುತರಮಲ.

(೧೭) ತಾತ್ಪರ್ಯ-ರಾಮ, ರಾಮ, ಎಂದು ಸ್ಮರಣೆಮಾಡಿದವನಿಗೆ ಸ್ವರ್ಗಲೋಕವು ದೊರೆಯುವುದು. ರಾಮ ! ರಕ್ಷಿಸು, ಎಂದು ಬೇಡಿದವನು ಬ್ರಹ್ಮಪದವಿಯನ್ನು ಪಡೆಯುವನು.

ರಾಮಚರಿತಾಮೃತವ ಕೇಳ್ದವ ।
ರಾಮನಿಗೆ ಸರಿಯಹನು ಜಗದೊಳು ।
ರಾಮನಾಮಕೆ ಸರಿಯ ಕಾಣೆನು ಎಂದು ಮುನಿ ನುಡಿದ ॥೧೭॥

ಒದವಿದಘ ಸಂಹತಿಯ ತಲೆದೋ ।
ರಿದೊಡೆ ದಹಿಸುವುದೆಡರನೌಕಿದೊ ।
ಡುದುಹಿ ಸುಡುವುದದುನ್ನತ ಪ್ರಳಯ ಪ್ರಪಂಚಗಳ ॥
ಮುದವನಿಹದಲಿ ಕೊಡುವುದಚ್ಯುತ ।
ಪದವ ಪರದೊಳಗೀವುದದು ನಿಗ ।
ಮದ ರಹಸ್ಯ ಪುರಾಣ ಕಥೆ ಮಿಗೆಯೆಂದು ಮುನಿನುಡಿದ ॥೧೮॥

---

## ಎರಡನೆಯ ಸಂಧಿ.

*

ಸೂಚನೆ॥ ಕುಶಲವರಿಗರುಹಿದನು ಪ್ರಾಚೇ ।
ತಸನು ದಿವಿಜ ಮುನೀಂದ್ರನುಪದೇ ।
ಶಿಸಿದ ರಾಮಾಯಣ ಸುಧಾಮಯ ಕಥನ ಕೌತುಕವ ॥

ನಿಗಮ ತತಿ ನಿಲುಕದ ಗುಣತ್ರಯ ।
ಹೊಗದ ಮಾಯಾಸತಿಯ ಸೊಬಗಿನ ।
ಸೊಗಸು ಸೋಂಕದ ಸಕಲ ಸಮ್ಯಜ್ಞಾನಿಗಳ ಮತಿಯ ॥

**ರಾಮನ ಕಥೆಯನ್ನು ಕೇಳಿದವನು ಶ್ರೀರಾಮನಿಗೆ ಸಮಾನವಾದ ಮಹಿಮೆಯನ್ನು ಪಡೆವನು.**

**(೧೮) ಅನ್ವಯ-ನಿಗಮದ ರಹಸ್ಯ ಪುರಾಣಕಥೆ, ಅದು ಮಿಗೆ ಒದವಿದ ಅಘ……… ದಹಿಸುವುದು, ಅದು ಎಡರಂ ಔಕಿದೊಡೆ ಉದುಹಿ ಉನ್ನತ………ಪಂಚಗಳ ಸುಡುವುದು, ಇಹದಲಿ ಮುದವಕೊಡುವುದು, ಪರದೊಳಗೆ ಅಚ್ಯುತಪದವ ಕೊಡುವುದು, ಎಂದು ಮುನಿ ನುಡಿದ.**

**ಅರ್ಥ:-ನಿಗಮದ ರಹಸ್ಯ-ವೇದಗಳಲ್ಲಿರುವ ಗುಟ್ಟು.**

**ಸೂಚನೆಯಪದ್ಯದ ಪ್ರಾಸಸ್ಥಾನದಲ್ಲಿ ಶಕಾರವೂ ಸಕಾರವೂ ಬಂದಿವೆ. ಪ್ರಾಸ ವಿಷಯದಲ್ಲಿ ಶ, ಷ, ಸ ಕಾರಗಳನ್ನು ಭೇದವಿಲ್ಲದಂತೆ ಉಪಯೋಗಿಸುವ ಸಂಪ್ರದಾಯವುಂಟು. ಇಂತಹ ಪ್ರಾಸಕ್ಕೆ ಸವಿಾಪಪ್ರಾಸವೆಂದು ಸಂಜ್ಞೆ.**

**(೧೯) ಅನ್ವಯ-ದೇವರ ದೇವನು ರಜತ ಶಿಖರಿಯಲಿ ಇದ್ದನು. ನಿಗಮತತಿ ನಿಲುಕದ ಮೊದಲಾದ ೬ ಪದಗಳು ಕರ್ತೃವಿಶೇಷಣಗಳಾಗಿವೆ.**

ಬಗೆಗೆ ಬಾರದ ಜನನಮರಣಾ ।
ದಿಗಳು ಹೊದ್ದದ ತೋರಿ ತೋರದ ।
ಜಗದ ದೇವರ ದೇವನಿದ್ದನು ರಜತಶಿಖರಿಯಲಿ ॥೧೯॥

ಪರಮ ಪರಮೇಶಾನ ಘನತ ।
ತ್ಪುರುಷ ನಿರ್ಮಲ ವಾಮದೇವ ।
ಸ್ಫುರಿತ ಸದ್ಯೋಜಾತ ವಿಮಲಾಘೋರ ನಾಮಕದ ॥
ಪರಮ ತತ್ತ್ವದ ಬಿತ್ತಿನೊಳಗಂ ।
ಕುರಗಳೈದಾದಂತೆ ತೋರುವ ।
ಪರಮ ತೇಜೋಮಯನು ಮೆರೆದನು ಪಂಚವಕ್ತ್ರದಲಿ ॥೨೦॥

ಶಿರದ ಚಂದ್ರನು ಫಾಲಲೋಚನ ।
ನುರಗ ಕುಂಡಲದಸಿತ ಕಂಠದ ।
ವರಕರಾಭಯ ಕರದ ಶೋಭಾಕರದ ತನುವಾಂತ ॥
ನಿರುಪಮಾಗಮ ನಿಗಮಮಯ ಬಂ ।
ಧುರದ ಕರಿ ಶಾರ್ದೂಲ ಚರ್ಮಾಂ ।
ಬರನು ಹರನೆಸೆದಿರ್ದನಗಜಾಸತಿಯ ಮೇಳದಲಿ ॥೨೧॥

ಭಾವಾರ್ಥ:- ವೇದ ವಚನಗಳಿಗೂ ಗೋಚರನಾಗದೆಯೂ ಗುಣತ್ರಯಗಳು ಸೇರದವನಾಗಿಯೂ, ಮಾಯೆಯ ಮಹಿಮೆಗೆ ಸಿಕ್ಕಿಕೊಳ್ಳದವನಾಗಿಯೂ, ಸುಜ್ಞಾನಿಗಳ ಮನಸ್ಸಿಗೂ ಗೋಚರನಾಗದೆಯೂ, ಹುಟ್ಟು ಸಾವುಗಳಿಲ್ಲದವನಾಗಿಯೂ, ಪ್ರಪಂಚರೂಪದಲ್ಲಿ ಕಂಡರೂ ಕಾಣದವನಾಗಿಯೂ, ದೇವೋತ್ತಮನಾಗಿಯೂ, ಇರುವ ಈಶ್ವರನು ಕೈಲಾಸಪರ್ವತದಲ್ಲಿದ್ದನು. ಗುಣತ್ರಯ-ಸತ್ತ್ವ, ರಜಸ್ಸು, ತಮಸ್ಸು.

(೨೦) ಈಶ್ವರನಿಗೆ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ ಎಂಬ ಐದು ಮುಖಗಳುಂಟು. ಬ್ರಹ್ಮತತ್ತ್ವವೆಂಬ ಬೀಜದಿಂದ ಐದು ಮೊಳಕೆಗಳಾದುವೋ ಎನ್ನುವಹಾಗೆ ಈಶ್ವರನಿಗೆ ಐದುಮುಖಗಳು ಪ್ರಕಾಶಿಸಿದುವು.

(೨೧) ಅನ್ವಯ-ಹರನು ಅಗಜಾ ಸತಿಯ ಮೇಳದಲಿ ಎಸೆದಿರ್ದನು. ಹರನು ಎಂಬ ಕರ್ತೃವಿಗೆ ೫ ವಿಶೇಷಣಗಳು ಮೊದಲಿನಲ್ಲಿವೆ. ಅತನು ಎಂಬ ವಿಶೇಷ್ಯಕ್ಕೆ ೪ ಷಷ್ಠ್ಯಂತಪದಗಳು ವಿಶೇಷಣಗಳಾಗಿವೆ.

ಅಸಿತ-ಬೆಳ್ಳಗಿಲ್ಲದ (ಕಪ್ಪಾದ), ಕಂಠ-ಕೊರಳುಳ್ಳವನು; ಅಗ-ಬೆಟ್ಟದಿಂದ ಜಾ-ಹುಟ್ಟಿದವಳು (ಪಾರ್ವತಿ)

ಸುರರು ವಸುಗಳು ಸಿದ್ಧವಿದ್ಯಾ ।
ಧರರು ಖಚರರು ಕಿನ್ನರರು ಕಿಂ ।
ಪುರುಷರುರಗರು ಮರುತ್ತುಗಳಗಣ ಯಕ್ಷರಾಕ್ಷಸರು ॥
ಗರುಡಗಂಧರ್ವರು ದಿಶಾಧೀ ।
ಶ್ವರರು ದಿವಿಜಮುನೀಂದ್ರ ಮುಖ್ಯಾ ।
ಮರಕದಂಬಕ ವಿದ್ದುದೋಲಗದಲಿ ಮಹೇಶ್ವರನ ॥ ೨೨ ॥

ಶ್ರುತಿಗಳೇ ಕೈವಾರಿಸುವ ಮಾ ।
ಗತೆಯರಖಿಲ ಮಹಾಪುರಾಣ ।
ಪ್ರತತಿಯೇ ಪಾಠಕರು ನಿಜದಣಿಮಾದಿಗಳೆ ಚರರು ॥
ಸ್ಮೃತಿಗಳೇ ತತ್ಕರದ ಕಂಚುಕಿ ।
ತತಿಗಳೆನಲೊಪ್ಪಿರ್ದುದಾ ಭಾ ।
ರತಿಯ ಹೊಗಳಿಕೆಯಲಿ ಸಭಾಸ್ಥಳವಾ ತ್ರಿಯಂಬಕನ ॥ ೨೩ ॥

ಆಸಮಯದಲಿ ಕೈಮುಗಿದು ಬಿ ।
ನ್ನೈಸಿದಳು ಭಾಳೇಕ್ಷಣಂಗಾ ।
ವಾಸುದೇವಸ್ತುತಿ ಪರಾಯಣೆ ಗೌರಿದೇವತೆಯು ॥
ಕೇಶವಾದಿಸಹಸ್ರನಾಮ ವಿ ।
ಲಾಸದೊಳ ಗಧಿನಾಮಧೇಯದ ।
ಭಾಸುರಾನುಗ್ರಹ ರಹಸ್ಯವನರುಹಬೇಕೆಂದು ॥ ೨೪ ॥

(೨೨) ದೇವತೆಗಳಲ್ಲಿ ಮೊದಲಿನ ೧೬ ಬಗೆಯ ಭೇದಗಳಿವೆ. ವಸುಗಳು:-ಧರ, ಧ್ರುವ ಸೋಮ, ಆಪ, ಅಗ್ನಿ, ಪ್ರಭಂಜನ, ಪ್ರತ್ಯೂಷ, ಪ್ರಭಾಸ; ಈ ಎಂಟೂ ಅಷ್ಟವಸುಗಳು. ಮರುತ್ತುಗಳು-ಆವಹ, ವಿವಹ, ಪ್ರವಹ, ಉದ್ವಹ, ಪರಿವಹ, ಸಂವಹ, ಪರಾವಹ; ಈ ಏಳೂ ಸಪ್ತ ಮರುತ್ತುಗಳು.

(೨೩) ಧ್ವ-ಮಾಗತೆ, ತ್ಸ-ಮಾಗಧಿ; ಅಣಿಮಾದಿಗಳು:-ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವ, ಈ ೮ ಸಿದ್ಧಿಗಳು.
ತತ್ಕರ-ಆ ಈಶ್ವರನ ಕೈಕೆಳಗಿರುವ

(೨೪) ಅನ್ವಯ-ವಾಸುದೇವಸ್ತುತಿಪರಾಯಣೆ ಗೌರಿದೇವತೆಯು ಕೇಶವಾದಿ......... ಬೇಕೆಂದು ಆ ಸಮಯದಲಿ ಭಾಳೇಕ್ಷಣಂಗೆ ಕೈಮುಗಿದು ಬಿನ್ನೈಸಿದಳು. ಈಪದ್ಯದ ಉತ್ತರಾರ್ಧವು ಪೂರ್ತಿಯಾಗಿ ಎಂದು ಎಂಬ ವಿಹಿತಕ್ರಿಯೆಗೆ ಕರ್ಮವಾಗಿದೆ. ಭಾವಾರ್ಥ-ಕೇಶವ ಮೊದಲಾದ ವಿಷ್ಣುವಿನ ಸಹಸ್ರನಾಮಗಳಲ್ಲಿ ಮುಖ್ಯ ಸಾರಭೂತವಾದ ನಾಮವಾವುದು? ಅದರ ರಹಸ್ಯವನ್ನು ತಿಳಿಸಬೇಕೆಂದು ಪಾರ್ವತಿಯು ಈಶ್ವರನನ್ನು ಕೇಳಿಕೊಂಡಳು.

ದೇವಿ ಕೇಳಾದಡೆ ಸಮಸ್ತ ।
ಸ್ಥಾವರಕೆ ಜಂಗಮಕೆ ಜಗತೀ ।
ಜೀವದಂತರ್ಯಾಮಿಯಹ ವಿಷ್ಣುವಿನ ನಾಮವನು ॥
ಆವನುಪಮಿಸಬಹುದು ಹೊಗಳಿದ ।
ಪಾವನಾಂಬಿಕೆ ಪೇಳ್ವ ಮಾತ್ರದಿ ।
ನಾವುಜನ್ಮಾದಿಗಳು ತೊಲಗುವುವಖಿಲಜನಗಳಿಗೆ ॥ ೨೫

ಆ ಪರಾಪರವಸ್ತುವಿನ ನಿಜ ।
ರೂಪಗುಣಶೌರ್ಯಾದಿಗಳ ಮಹಿ ।
ಮಾಪಯೋಧಿಯ ನೆಲೆಯ ನರಿವವರಾರು ಲೋಕದಲಿ ॥
ಆಪುರಾತನ ಪುರುಷನಭಿಧಾ ।
ನೋಪಲಕ್ಷಣಲಕ್ಷಿತಗಳ ಕ ।
ಲಾಪ ರಚನೆಯ ಕಂಡೆನಗ್ಗದ ರಾಮನಾಮದಲಿ ॥ ೨೬

ಗಿರಿಜೆ ಕೇಳು ಸಹಸ್ರನಾಮದ ।
ಸರಿಕಣಾ ರಘುರಾಮಚಂದ್ರನ ।
ಪರಮಮಂಗಳನಾಮ ನಿರುಪಮನಿಗಮ ವಿಶ್ರಾಮ ॥

(೨೫) ಹೊಗಳಿ + ಇದ, ಇದ ಹೊಗಳಿ ಆವನು ಉಪಮಿಸಬಹುದು? —ವಿಷ್ಣುವಿನ ನಾಮ ವನ್ನು ಯಾವನು ತಾನೇ ಹೊಗಳಿ ಸಾಮ್ಯವನ್ನು ಹೇಳಬಲ್ಲನು? ಇದಕ್ಕೆ ಸಮಾನವಾದ ಸಾದೃಶ್ಯವನ್ನು ಲೋಕದಲ್ಲಿಲ್ಲವೆಂದು ಭಾವವು. ಪಾವನಾಂಬಿಕೆ —ಪಾವನವನ್ನುಂಟುಮಾಡುವ ಅಂಬಿಕೆಯು.

(೨೬) ಅರ್ಥ – ಮಹಿಮಾಪಯೋಧಿಯ–ಮಾಹಾತ್ಮ್ಯವೆಂಬ ಸಮುದ್ರದ, (ಅಗಾಧವಾದಮಹಿ ಮೆಯ); ಅಭಿಧಾನೋಪ...ರಚನೆಯ, ಹೆಸರುಗಳಿಗೆ ಗುರುತಾಗಿರುವ ವಿಷಯಗಳಗುಂಪಿನವಿವರವನ್ನು.

ಭಾವಾರ್ಥ – ಆ ಮಹಾವಿಷ್ಣುವಿನ ಗುಣ ರೂಪ ಶೌರ್ಯಾದಿಗಳನ್ನು ಯಾರೂ ಅರಿಯರು. ಆತನ ಹೆಸರಿಗೆ ತಕ್ಕ ಗುರುತುಗಳನ್ನು ರಾಮನಾಮದಲ್ಲಿ ನಾನುಕಂಡೆನು.

(೨೭) ಪದಚ್ಛೇದ – ನಿನಗೆ + ಉರುತರಾನುಗ್ರಹದ; ಇದು + ಈಗ + ಎಂದ;

ಅರ್ಥ: – ಉರು.........ಕ್ಷರವು ಉರುತರ — ಹೆಚ್ಚಾದ, ಅನುಗ್ರಹದ — (ವಿಷ್ಣುವಿನ) ಕೃಪೆ ಗೆ, ಬೀಜ — ಕಾರಣವಾದ, ಅಕ್ಷರವು — ವರ್ಣವು.

ಭಾವಾರ್ಥ: – ಶ್ರೀರಾಮ, ಎಂಬ ಒಂದೇನಾಮವು, ವಿಷ್ಣುವಿನ ಸಾಸಿರನಾಮಗಳಿಗೆ ಸಮಾನವಾ ದುದು ನಿನಗೆ ಆತನನುಗ್ರಹವಾಗುವುದಕ್ಕೆ ಇದು ಬೀಜಮಂತ್ರವು ಎಂದು ಶಿವನುಪಾರ್ವತಿಗೆಹೇಳಿದನು

ನಿರುತವಿದು ನಿಜವೆಂದು ಬಗೆ ನಿ ।
ರ್ಧರಿಸಿದೆವು ನಿಗಮಾರ್ಥದಲಿ ನಿನ ।
ಗುರುತರಾನುಗ್ರಹ ದಬೀಜಾಕ್ಷರ ವಿದೀಗೆಂದ ॥ ೨೭ ॥

ಹಾ ಮಹಾದೇವೆಂದು ಪುಳಕಿತ ।
ರೋಮಹರ್ಷಿತೆಯಾಗಿ ಕರಯುಗ ।
ತಾಮರಸವನು ಮುಗಿದು ರಾಮನ ನೆನೆದು ಕಣ್ದೆರೆದು॥
ಆಮಹಾತ್ಮನ ಗುಣಚರಿತ್ರೋ ।
ದ್ದಾಮತೆಯ ನಾಜ್ಞಾಪಿಸೆಂದು ಸು ।
ಧಾಮರೀಚಿಧರಂಗೆ ಬಿನ್ನೈಸಿದಳು ಗಿರಿಜಾತೆ ॥ ೨೮ ॥

ಆದಡವಧರಿಸೆ ಒಡನೆಯ ಯುಗ ।
ದಾದಿಯಲಿ ಕ್ರೌಂಚಾಟವಿಯಲಿ ಮ ।
ಹಾದುರಾತ್ಮವ್ಯಾಧ ನಿದ್ದನು ಚೋರ ವೃತ್ತಿಯಲಿ ।
ಆದಿವಾಂಗಣದಿಂ ಭರದ್ವಾ ।
ಜಾದಿಮುನಿಗಳು ಬರಲುಕಂಡನು ।
ಹಾದಿಯಲಿ ಬಳಿಕಾಪ್ರಯಾಗೆಯ ಬದರಿಕಾಶ್ರಮದ ॥ ೨೯ ॥

ದನಾಮಕ್ಕೆ ಸರಿ, ಇಲ್ಲಿ ಪ್ರತಿನಿಧಿ ಎಂಬರ್ಥದಲ್ಲಿ ಚತುರ್ಥೀವಿಭಕ್ತಿ ಬರಬೇಕಾಗಿತ್ತು. ವಿಭಕ್ತಿಪಲ್ಲಟದಿಂದ ಚತುರ್ಥ್ಯರ್ಥದಲ್ಲಿ 'ನಾಮದ' ಎಂದು ಷಷ್ಠಿ ಬಂದಿದೆ.

(೨೮) ಮಹಾದೇವ + ಎಂದು = ಮಹಾದೇವೆಂದು, — ಸ್ವಭಾವವಾಗಿ ಅಕಾರಾಂತವಾಗಿರುವ ಅನುಕರಣಕ್ಕೆ ಸ್ವರವು ಪರವಾದರೆ ವಿಕಲ್ಪವಾಗಿ ಪ್ರಕೃತಿಭಾವವು ಬರುವುದು. ಆದುದರಿಂದ ಮಹಾದೇವ ಎಂದು, ಎಂದಾದರೆ ಪ್ರಕೃತಿಭಾವವೆಂತಲೂ, ಮಹಾದೇವೆಂದು ಎಂದಾದರೆ ಲೋಪಸಂಧಿ ಎಂತಲೂ ತಿಳಿಯಬೇಕು.

ಕರಗಳಯುಗ — ಕರಯುಗ (ಷ. ತ) ತಾಮರಸದಂತಿರುವ ಕರಯುಗ — ತಾಮರಸಕರಯುಗಳ (ಉ. ಉ. ಕರ್ಮ. ಸ) ಸುಧಾ — ಅಮೃತದ, ಮರೀಚಿ — ಕಿರಣಗಳುಳ್ಳವನು. ಸುಧಾಮರೀಚಿ (ಚಂದ್ರ)

(೨೯) ವ್ಯಾಧ — ತತ್ಸಮ, ಬೇಡ — ತದ್ಭವ. ಹಾದಿ ಎಂಬುದು ಉತ್ತರಮಾರ್ಗದ ಕನ್ನಡ. ಭರದ್ವಾಜಾದಿಮುನಿಗಳು ಅಪ್ರಯೋಗೆಯ, ಬದರಿಕಾಶ್ರಮದ ಹಾದಿಯಲಿ ಬರಲು ಕಂಡನು ಎಂದನ್ವಯವು.

ಅವರನುಗ್ರಹದಿಂದ ತಪಸಂ ।
ಭವಿಸಿತಾ ವ್ಯಾಧಂಗೆ ವಾರಿಜ ।
ಭವನ ದೆಸೆಯಿಂದಾಯ್ತು ಪರಮರ್ಷಿತ್ವವಾತಂಗೆ ॥
ಅವತರಿಸಿದನು ಬಳಿಕ ಮುನಿಪುಂ ।
ಗವನು ವಲ್ಮೀಕದಲಿ ಹೆಸರಾ ।
ಯ್ತವನಿಯಲಿ ವಾಲ್ಮೀಕಿಮುನಿಯೆಂದಗಜೆ ಕೇಳೆಂದ ॥ ೩೦ ॥

ಆತಪೋಧನ ಬಳಿಕ ಮುನಿಸಂ ।
ಜಾತದಲಿ ಸೇರಿದನು ಸುಜನ ।
ಖ್ಯಾತನಾದನು ಸುಳಿದುವಿದಿರೊಳು ಕ್ರೌಂಚಖಗಯುಗಳ ॥
ಆತಪೋರ್ವಿಯೊಳೊರ್ವ ದುಷ್ಟಕಿ ।
ರಾತನವ ಕಂಡೆಸೆಯ ಲದರೊಳು ।
ಚೇತನಂ ಬಿಟ್ಟೊದರಿ ಕೆಡೆದುದು ವಿಹಗಪತಿ ನೆಲಕೆ ॥ ೩೧ ॥

ಅರೆಮುಗಿದಲೋಚನದ ಸಂಪುಟ ।
ವರಳಿ ಚಲಿಸುವ ಚಂಚುಪುಟ ।
ದು ರಿಪರಿಸಿ ದಂಷ್ಟ್ರಿಯಕೆದರ್ದ ರಕ್ಕೆಯ ಪರಿದತುಪ್ಪುಳಿನ ॥
ಕೊರಳಮಿಡುಕಿನ ಮಲಿನಮುಖದಲಿ ।
ಸುರಿವನೆತ್ತರಪತಿಯ ಸುತ್ತಲು ।
ತಿರುಗಿ ಚೀರುವ ವಿಹಗಸತಿಯನು ಕಂಡನಾಮುನಿಪ ॥ ೩೨ ॥

(೩೦) ವಾರಿಜ — ಕಮಲದಲ್ಲಿ, ಭವ — ಹುಟ್ಟಿದವನು (ಬ್ರಹ್ಮ). ವಲ್ಮೀಕ — ಹುತ್ತ, ಅದರಿಂದ ಹುಟ್ಟಿದವನು = ವಾಲ್ಮೀಕಿ.

ಪೂರ್ವಕಥೆ-ಬೇಡನು ಭರದ್ವಾಜನ ದರ್ಶನದಿಂದ ತನ್ನ ಚೋರವೃತ್ತಿಯಲ್ಲಿ ಜುಗುಪ್ಸೆಯನ್ನು ಪಡೆದು, ಅವರಿಂದ ಉಪದೇಶವನ್ನು ಹೊಂದಿ ತಪಸ್ಸು ಮಾಡುತ್ತಾ ಕುಳಿತಿರಲು, ಬಹುಕಾಲವು ಕಳೆದು ಹೋಯಿತು. ಬಳಿಕ ಭರದ್ವಾಜನು ಆ ಮಾರ್ಗವಾಗಿ ಬರುತ್ತಾ ತಪೋನಿಷ್ಠನಾಗಿ 'ರಾಮನಾಮವನು ಜಪಿ ಸುತ್ತಿದ್ದ ಈ ಬೇಡನ ಧ್ವನಿಯನ್ನು ಕೇಳಿ, ಅಲ್ಲಿ ಹುಡುಕಲು ಅವನ ಮೇಲೆ ಹುತ್ತವು ಬೆಳೆದಿತ್ತು; ಅದನ್ನು ಬಿಡಿಸಲು ಆ ಬೇಡನು ಋಷಿಯಾಗಿ ಈಚೆಗೆ ಬಂದನು. ಭರದ್ವಾಜನು ಅವನನ್ನು ಅನುಗ್ರಹಿಸಿ ಹೊರಟು ಹೋದನು. ಆಗಿನಿಂದ ವಾಲ್ಮೀಕಿ ಎಂದು ಹೆಸರಾಯ್ತು. ತಪ-ಸಂಸ್ಕೃತದ ಸಕಾರಾಂತ ಶಬ್ದಗಳು ಕೊನೆಯ ಅಕ್ಷರದ ಲೋಪವನ್ನು ಹೊಂದಿ ಕನ್ನಡಕ್ಕೆ ಲಿಂಗವಾಗುವುವು ಎಂಬ ಸೂತ್ರದಿಂದ ತಪಸ್-ಎಂಬುದು ತಪ ಎಂದಾಯ್ತು.

(೩೧) ತಪೋರ್ವಿ — ತಪೋವನ, ಚೇತನಮಂ + ಬಿಟ್ಟು — ಚೇತನಂಬಿಟ್ಟು (ಕ್ರಿಯಾಸಮಾಸ). ವಿಹ — ಆಕಾಶದಲ್ಲಿ, ಗ — ಸಂಚರಿಸುವುದು — ವಿಹಗ (ಹಕ್ಕಿ). ಇಸು — ಶರವಿಮೋಚನೆ ಎಂದು ಧಾತುಪಾಠದಲ್ಲಿದೆ. ಇಸಲ್, ಎಂದು ರೂಪವಾಗುವುದು. ಇಲ್ಲಿ ಎಸೆ, ಎಂಬ ಧಾತುವಾಗಿ ಉಪಯೋಗಿಸಿದ್ದಾನೆ. ಇದು ಉತ್ತರಮಾರ್ಗದ ಕನ್ನಡದಧಾತು.

(೩೨) ಪತಿಯ, ಎಂಬ ವಿಶೇಷ್ಯಕ್ಕೆ ಮೊದಲಿನ ೭ ಷಷ್ಠ್ಯಂತಪದಗಳು ವಿಶೇಷಣಗಳಾಗಿವೆ.

ನೊಂದುದಲ್ಲಾ ಕ್ರೌಂಚಪತಗ ಪು ।
ರಂದರನು ತಾನೆನುತ ಮನದಲಿ ।
ನೊಂದು ನಯನದೊಳೊಸರಿ ಸೂಸಿದುವಶ್ರುಧಾರೆಗಳು ॥
ಒಂದುನಿಮಿಷಕೆ ವಿಹಗಪತಿಬಳಿ ।
ಕೊಂದಿದುದು ಮರಣದಲಿ ಕೇಳರ ।
ವಿಂದಮುಖಿ! ಶೋಕಿಸಿದನಾ ಮುನಿನಾಥ ಮರುಕದಲಿ ॥ ೩೩ ॥

ಶೋಕದಲಿ ಹಳವಿಸಲು ಕಡು ತಾ ।
ಲೋಕಪದ್ಧತಿ ಯಾಗಿ ಯಿಳಿದನು ।
ನಾಕದಿಂ ನಾರದನು ತನ್ಮುನಿವರನ ಸರಿಸದಲಿ ॥
ಈಕುತೂಹಲ ರಚನೆಯನು ವಾ ।
ಲ್ಮೀಕಿಮುನಿಯಲಿ ಕಂಡು ಬಳಿಕಾ ।
ಶೋಕಸರಣಿಗೆ ಶಿರವನೊಲೆದನು ನಾರದನು ನಗುತ ॥ ೩೪ ॥

ಅಹುದಲೇ ವಾಲ್ಮೀಕಿ ಕವಿತೆಯ ।
ರಹಣಿ ಲೇಸೈ ಶೋಕಮುಖದ ।
ನ್ನಿಹಿತವಹ ಶ್ಲೋಕಪ್ರಬಂಧ ಸುಕಾವ್ಯರಚನೆಯಲಿ ॥
ವಹಿಸಲೀ ಪದ್ಧತಿ ಪರಿಶ್ರುತ ।
ಮಹುದು ಬಳಿಕೀ ಲೋಕದಲಿ ನಿನ ।
ಗಹುದು ಕೀರ್ತಿ ಪ್ರಥಮಕವಿಯೆಂದಜನಸಭೆಯೊಳಗೆ ॥ ೩೫ ॥

(೩೩) ಪುರಂದರ _ ಇಂದ್ರ, ಇಂದ್ರನೆಂದರೆ ಶ್ರೇಷ್ಠ, ಅಥವಾ ಒಡೆಯ ಎಂಬರ್ಥವಿರುವುದ ರಿಂದ ಇಲ್ಲಿ ಪುರಂದರಶಬ್ದವನ್ನು ಒಡೆಯ ಎಂಬರ್ಥದಲ್ಲಿ ಉಪಯೋಗಿಸಿದ್ದಾನೆ. :-ಕ್ರೌಂಚಪತಗ ಪುರಂದರನು _ ಕ್ರೌಂಚ ಪಕ್ಷಿಗಳೊಡೆಯನು. ಸೂಸಿದುವು _ ಸುರಿಸಲ್ಪಟ್ಟುವು

(೩೪) ಪ್ರಲಾಪ + ಇಸು = ಪ್ರಲಾಪಿಸು ಇದಕ್ಕೆ ತದ್ಭವವಾಗಿ ಹಳವಿಸು ಎಂದಾಗಿದೆ. ನಾಕ = ಕ _ ಸುಖ, ಅದಿಲ್ಲದುದು _ ಅಕ, (ಸುಖಾಭಾವ) ಅದಿಲ್ಲದುದು _ ನಾಕ (ಸ್ವರ್ಗ) ನಾರದ ನಾರ _ ಮನುಷ್ಯಸಂಬಂಧವಾದ(ಪಾಪಗಳನ್ನು)ದ _ ಪರಿಹರಿಸತಕ್ಕವನು, ನಾರದ

(೩೫) ಭಾವಾರ್ಥ- ಎಲೈ ವಾಲ್ಮೀಕಿಯೇ ದುಃಖದಿಂದ ನೀನುಹೇಳಿದ ಶಾಪರೂಪವಾದ ಶ್ಲೋಕವು ಉತ್ತಮವಾದುದು. ಇದರಿಂದ ನೀನು ಆದಿಕವಿಯೆಂಬ ಹೆಸರುಲೋಕಪ್ರಸಿದ್ಧವಾಗಿ ಬ್ರಹ್ಮನಸಭೆಯಲ್ಲಿಯೂ ನಿನ್ನ ಕಾವ್ಯವು ಶ್ಲಾಘನೆಗೆ ಅರ್ಹವಾಗುವುದು. ಇದು ಕೆಟ್ಟುದೆಂದು ಚಿಂತಿಸಬೇಡ, ಎಂದು ನಾರದನು ನುಡಿದನು.

ಎಂದು ನಿಜವನು ತೋರಿ ಮುನಿ ರಘು ।
ನಂದನೋಪಾಖ್ಯಾನವನು ಮುದ ।
ದಿಂದ ಸಂಕ್ಷೇಪದಲನುಗ್ರಹವಿತ್ತು ಹಂಸೆಯಲಿ ॥
ಸಂದನಜಪುರಿ ಗತ್ತಲಾಮುನಿ ।
ಕಂದೆರೆದು ಮಾಡಿದನು ಕೇಳರ ।
ವಿಂದಮುಖಿ ಲೋಕದಲಿ ರಾಮಾಯಣಕಥಾಮೃತವ ॥ ೩೬ ॥

ಜಾತರಹಿತನು ಜನಿಸಿದನು ಖ ।
ದ್ಯೋತಕುಲದಲಿ ರಘುದಿಲೀಪಾ ।
ಖ್ಯಾತರೊಳಗ ಗ್ಗಳದ ದಶರಥನೃಪನ ಗರ್ಭದಲಿ ॥
ಭೂತಳದ ದುರ್ಜನವ ಪುನದ ವಿ ।
ಘಾತಿಗೋಸುಗ ವಗಜೆ ಕೇಳ್ಪುರು ।
ಹೂತ ಮುಖ್ಯರ ದುರಿನಲಿ ರಾಮಾಭಿಧಾನದಲಿ ॥ ೩೭ ॥

ಬಾಲತನದಲಿ ತಾಟಕೆಯ ಗೋ ।
ಮಾಳಿಯನು ಗೋರಿದನು ಕದನದ ।
ಕೇಳಿಯಲಿ ಕಡುಗಲಿ ಸುಬಾಹು ಪ್ರಮುಖರಾಕ್ಷಸರ ।
ಸೀಳಿದನು ಸಲಹಿದನು ಮುನಿಕುಲ ।
ಪಾಲ ಕೌಶಿಕನಧ್ವರವ ಪದ ।
ಧೂಳಿಯಲಿ ದೂಟಿದನಹಲ್ಯಾಸತಿಯ ದುಷ್ಕೃತವ ॥ ೩೮ ॥

ಎರಡನೆಯ ನಮ್ಮುಗ್ರ ಚಾಪವ ।
ನೆರೆದ ನೃಪರಲಿ ಗೆಲಿದು ಸೀತೆಯ ।
ವರಿಸಿ ಭಾರ್ಗವನುರುಭುಜದದರ್ಪವನು ಪರಿಹರಿಸಿ ॥
ಗುರುನಿರೂಪವ ಧರಿಸಿ ವನವನು ।
ಚರಿಸಿ ಚಂಡಖರಾದಿಗಳ ಸಂ ।
ಹರಿಸಿ ಕಡಲನು ಕಟ್ಟಿ ಗೆಲಿದನು ಕಲಿದಶಾಸನನ ॥ ೩೯ ॥

(೩೬) ಊಷ್ಮ ಮೊದಲಾದ ಶಬ್ದಗಳ ಕೊನೆಯಸ್ವರಕ್ಕೆ ಎಕಾರಾದೇಶವು ವಿಕಲ್ಪವಾಗಿ ಬರುವುದು. ಊಷ್ಮ — ಊಷ್ಮೆ, ಹಂಸ — ಹಂಸೆ,

(೩೭) ಖ — ಆಕಾಶದಲ್ಲಿ, ದ್ಯೋತ — ಪ್ರಕಾಶಿಸುವವನು, ಖದ್ಯೋತ (ಸೂರ್ಯ). ಪುರು—ಬಹಳವಾಗಿ, ಹೂತ — (ಯಜ್ಞದಲ್ಲಿ) ಕರೆಯಲ್ಪಡುವವನು — ಪುರುಹೂತ (ಇಂದ್ರ)

(೩೮) ಬಾಲ ಎಂಬ ಶಬ್ದದಮೇಲೆ ತನ ಎಂಬ ಪ್ರತ್ಯಯವು ಭಾವಾರ್ಥದಲ್ಲಿಬಂದು ಬಾಲತನ ಎಂದಾಯ್ತು. ದೂಟು — ಇದು ದಕ್ಷಿಣಮಾರ್ಗದಲ್ಲಿ ದೂಂಟು ಎಂದು ಆಗುವುದು.

(೩೯) ಗುರು — ತಂದೆ, ಉಪಾಧ್ಯಾಯ, ಬೃಹಸ್ಪತಿ, ದೊಡ್ಡದು, ಎಂಬ ಅರ್ಥಗಳುಂಟು.

ಭಾರವಿಳಿದುದು ಬಳಿಕ ವಸುಧಾ ।
ನಾರಿಗೊಲಿಸಿದ ಗೊಣಸು ಸಾಸಿರ ।
ನೇರಿತಾದುವು ಫಣಿಪತಿಯ ಪದ್ಮಜಪುರಂದರರ ॥
ಊರೊಳಗೆ ಗುಡಿಕಟ್ಟಿದುವು ಘನ ।
ಭೂರಿಭುವನ ಜನೌಘ ಹರುಷವ ।
ವಾರಿಧಿಯ ಲೋಲಾಡಿದುದು ದಶಶಿರನ ಮರಣದಲಿ ॥ ೪೦ ॥

ಶರಣವೊಕ್ಕ ವಿಭೀಷಣನ ಪತಿ ।
ಕರಿಸಿ ಲಂಕಾರಾಜ್ಯವನು ಸರ ।
ಸಿರುಹ ಭವನಾಯುಷ್ಯ ಪರಿಯಂತಿತ್ತ ಕರುಣದಲಿ ॥
ಸುರರನೆಲ್ಲರ ಸಲಹಿ ವಿಶ್ವಂ ।
ಭರೆಯ ಭಾರವನಿಳುಹಿ ಸುಜನೋ ।
ದ್ಧರಣ ನೈದಿದ ನಮಲತರ ಸಾಕೇತಪುರವರವ ॥ ೪೧ ॥

---

## ಮೂರನೆಯಸಂಧಿ.

ಸೂಚನೆ ॥ ಮನುಮಹೀಶಾನ್ವಯದ ಜನಪರ ।
ಜನನವನು ವಾಲ್ಮೀಕಿ ಸೀತಾ ।
ತನಯರಿಗೆ ವಿಸ್ತರಿಸಿದನು ಕುಶಲವ ಕುಮಾರರಿಗೆ ॥

ಈಕಥೆಯ ನಾದಿವಿಜಮುನಿ ವಾ ।
ಲ್ಮೀಕಿಗ ರುಹಿದನಾಮುನಿಪ ನಿ ॥
ಕ್ಷ್ವಾಕುಕುಲ ಕುಶಲವರಿ ಗೊರೆದನು ಬಹಳ ರಚನೆಯಲಿ ॥

(೪೦) ಭೂಭಾರವು ಕಡಿಮೆಯಾದುದರಿಂದ ಮೊದಲು ಭಾರಕ್ಕೆ ಬಗ್ಗಿಹೋಗಿದ್ದ ಆದಿಶೇಷನ ಹೆಡೆಗಳು ನೇರವಾದುವು. ಪದ್ಮ _ ಕಮಲದಲ್ಲಿ, ಜ _ ಹುಟ್ಟಿದವನು (ಬ್ರಹ್ಮ)
ಪುರ _ ಶತ್ರುಗಳಪಟ್ಟಣಗಳನ್ನು, ದರ _ ನಾಶಮಾಡಿದವನು ಪುರಂದರ (ಇಂದ್ರ)

(೪೧) ವಿಶ್ವ _ ಲೋಕವನ್ನು, ಧರೆ _ಹೊತ್ತಿರತಕ್ಕವಳು (ಭೂಮಿ). ಅಲ್ಲಿ, ಎಂಬ ಸಪ್ತಮೀ ವಿಭಕ್ತಿಪ್ರತ್ಯಯವು ಉತ್ತರಮಾರ್ಗದಲ್ಲಿ ದ್ವಿತ್ವವಿಲ್ಲದೆ ಅಲಿ ಎಂದು ಪ್ರಯೋಗಿಸಲ್ಪಟ್ಟಿದೆ. ಪುರಗಳಲ್ಲಿ ವರ _ ಪುರವರ (ಸ. ತ) ಸಾಕೇತವೆಂಬ ಪುರವರ _ ಸಾಕೇತಪುರವರ (ಸಂ. ಪೂರ್ವ. ಕ.)

(೪೨) ದಿವಿ _ ಸ್ವರ್ಗದಲ್ಲಿ ಜ _ ಹುಟ್ಟಿದವನು(ದೇವತೆ)ದಿವಿಜನಾದ ಮುನಿ _ ದಿವಿಜಮುನಿ (ನಾರದನು). ಋಷಿಗಳಲ್ಲಿ ದೇವರ್ಷಿ ಬ್ರಹ್ಮರ್ಷಿ ಎಂಬ ಭೇದಗಳಿವೆ. ನಾರದ, ಪರ್ವತ, ಸನಕ, ಸನಂ

ಆಕಥೆಯ ಕೇಳೆಂದು ಸತಿಗೆ ಪಿ।
ನಾಕಧರ ವಿಸ್ತರಿಸಿದನು ಬಳಿ।
ಕಾ ಕಕುಸ್ಥಜಗಾದ ಮೇಲಣ ಕಥೆಯ ಕೌತುಕವ ॥ ೪೨॥

ಗಿರಿಜೆ ಕೇಳ್ ಪಟ್ಟಾಭಿಷೇಕೋ।
ತ್ಕರುಷವಾದುದು ಮೇಲೆ ವಸುಧೆಯ।
ನರಪತಿಗಳೈತಂದು ಕಂಡರು ರಾಘವೇಶ್ವರನ॥
ಕರವ ನವರವರೊಡಬಡಿಕೆಯಲಿ।
ತರಿಸಿಕೊಂಡು ಸಮಸ್ತಧರಣೀ।
ಶ್ವರರಿಗಧಿಪತಿಯಾಗಿ ಮೆರೆದನು ರಾಜತೇಜದಲಿ ॥ ೪೩ ॥

ಮಿಗಿಸಿದನು ರವಿರಾಜವಂಶಾ।
ದಿಗಳ ರಾಯರ ರಾಜಧರ್ಮದ।
ಸೊಗಸ ನಮಲಚರಿತ್ರದಲಿ ಪಾಲಿಸಿದನುರ್ವಿಯನು॥
ಅಗಜೆಕೇಳ್ ಕೆಲವಾನುದಿವಸಕೆ।
ಚಿಗುರಿ ದುರ್ವಾರ್ತಾಲತೆಯು ನಿಜ।
ನಗರದಲಿ ಲಂಬಿಸಿತು ಕರ್ಣದೊಳಾ ಕಕುಸ್ಥಜನ ॥ ೪೪ ॥

ಏತರರಸು ಕಕುಸ್ಥಜನು ಕಾ।
ಮಾತುರದಲ ಸುರೇಂದ್ರ ಬನದಲಿ।
ಸೀತೆಯನು ಕೊಂಡೊಯ್ಯೆ ಬಿಡಲಾರದೆ ನಿಜಾನ್ವಯದ॥

ದನ, ಮೊದಲಾದವರು ದೇವರ್ಷಿಗಳು. ವಶಿಷ್ಠ, ವಿಶ್ವಾಮಿತ್ರ ಮೊದಲಾದವರು ಬ್ರಹ್ಮರ್ಷಿಗಳು.
ಪಿನಾಕ _ ಪಿನಾಕವೆಂಬಬಿಲ್ಲನ್ನು, ಧರ — ಧರಿಸಿದವನು _ ಪಿನಾಕಧರ (ಈಶ್ವರನು)

(೪೩) ಪಟ್ಟಾಭಿಷೇಕೋತ್ಕರುಷ _ ಪಟ್ಟಾಭಿಷೇಕೋತ್ಸವವು, ವಸು _ ಧನಕ್ಕೆ, ಧಾ-ಆಶ್ರಯವಾದುದು — ವಸುಧೆ (ಭೂಮಿ). ಅವರವರ _ ವೀಪ್ಸಾರ್ಥದಲ್ಲಿ ದ್ವಿರುಕ್ತಿ ಬಂದಿದೆ.

(೪೪) ಭಾವಾರ್ಥ ಶ್ರೀರಾಮನು ಸೂರ್ಯಚಂದ್ರವಂಶದ ದೊರೆಗಳನ್ನು ರಾಜಧರ್ಮದಲ್ಲಿ ಮೀರಿಸಿದನು. ಹೀಗೆಯೇ ಕೆಲವುಕಾಲ ರಾಜ್ಯವಾಳುತ್ತಿರಲು ಅಯೋಧ್ಯೆಯಲ್ಲಿ ಸೀತೆಯ ವಿಷಯಕವಾದ ಅಪವಾದವು ಹುಟ್ಟಿ ಹಬ್ಬುತ್ತಾ ರಾಮನಕಿವಿಗೂ ಬಿದ್ದಿತು. ದುರ್ವಾರ್ತೆಯೇಲತೆ _ ದುರ್ವಾರ್ತಾಲತೆ
(ಅವ. ಪೂರ್ವ. ಕ) ನಿಜವಾದ ನಗರ _ ನಿಜನಗರ ( ವಿ. ಪೂರ್ವ. ಕ)

(೪೫) ಅಸುರೇಂದ್ರ _ ರಾವಣನು, ಬನದಲಿ _ ವನವಾಸಮಾಡುತ್ತಿದ್ದಾಗ. ನಿಜಾನ್ವಯದ ಖ್ಯಾತಿಯನು ಕೆಡಿಸಿದನು. ಧರ್ಮಮಾರ್ಗವನ್ನು ಬಿಡುವವರಲ್ಲವೆಂದು ತನ್ನ ವಂಶಕ್ಕೆಬಂದಿದ್ದ ಪ್ರಸಿದ್ಧಿಯನ್ನು ನಾಶಮಾಡಿದನು.

ಖ್ಯಾತಿಯನು ಕೆಡಿಸಿದನು ಎಂಬೀ ।
ಮಾತು ಭದ್ರಕನಿಂದ ರಘುಸಂ ।
ಜಾತನಿದಿರಲಿ ಬಿದ್ದುದಾತನ ಕೀರ್ತಿ ಶಂಕದಲಿ ॥ ೪೫ ॥

ಕೇಳಿ ಕಡುಸಿಗ್ಗಾಗಿ ಸಿಗುರೆ ।
ದ್ದೇಳಿಗೆಯ ಚಿಂತೆಯಲಿ ಜಗದಜ ॥
ನಾಳಿಕೆಯ ಪದ್ಧತಿ ತಿರಸ್ಕರಿಸುವುದಲೇ ಯೆನುತ ॥
ಕೇಳಿಸಿದನೀ ನುಡಿಯ ನನುಜರ ।
ಮೇಳದಲಿ ಮೈತ್ರಾವರುಣಿ ಜಾ ।
ಬಾಲಿಗಳಲಿ ಸುಮಂತ್ರಮುಖ್ಯಮಹಾಪ್ರಧಾನರಲಿ ॥ ೪೬ ॥

ಲೋಕದುರ್ಜನರುಗಳ ರಸನಾ ।
ನೀಕದಪಹಾಸಕ್ಕೆ ಠಾವಿದು ।
ಲೌಕಿಕಕ್ಕಿದು ದುಷ್ಟವೆಂದವರುಗಳ ನೊಡಬಡಿಸಿ ॥
ಲೋಕವರಿಯಲು ಬಿಟ್ಟು ಬಾ ವಾ ।
ಲ್ಮೀಕಿ ಭವನದೊಳೆಂದು ವಿಮಲೇ ।
ಕ್ಷ್ವಾಕುಕುಲಸಂಭವನು ಸೌಮಿತ್ರಿಗೆ ನಿರೂಪಿಸಿದ ॥ ೪೭ ॥

ಅವನಿಪನ ನೇಮದಲಿ ಬಯಕೆಯ ।
ನೆವದಿ ನಾಪತಿಭಕ್ತೆಯನು ಮುನಿ ।
ಭವನದಲಿ ಬಿಟ್ಟನು ಕಣಾ ಕೊಂಡೊಯ್ದು ಸೌಮಿತ್ರಿ ॥

ಭದ್ರಕ — ಇವನೊಬ್ಬ ಗೂಢಚಾರನು. ಬಿದ್ದುದು ಎಂಬುದನ್ನು ಎರಡುಸಾರಿ ಅನ್ವಯದಲ್ಲಿ ಸೇರಿಸಬೇಕು. ಈ ಮಾತು ಭದ್ರಕನಿಂದ ರಘುಸಂಜಾತನಿದಿರಲಿ ಬಿದ್ದುದು, ಆತನ ಕೀರ್ತಿ ಶಂಕದಲಿ ಬಿದ್ದುದು, ಎಂದು ಅನ್ವಯವು.

(೪೬) ಜನಾಳಿಕೆಯ ಪದ್ಧತಿ — ಜನಸಮೂಹದ ಪದ್ಧತಿ. ಮಿತ್ರಾವರುಣನನುಗ-ಮೈತ್ರಾವರುಣ (ಅಗಸ್ತ್ಯ). ಸಿಗ್ಗಾಗಿ — ಸಿಗ್ಗು + ಆಗಿ — ಬಹಳವಾಗಿ ನಾಚಿಕೆ ಪಟ್ಟು

(೪೭) ಭಾವಾರ್ಥ:-ಇದು ಪ್ರಪಂಚದಲ್ಲಿರುವ ದುಷ್ಟರ ಅಪಹಾಸ್ಯಕ್ಕೆ ಕಾರಣ. ಲೋಕವಿರೋಧ, ಎಂದು ಅಗಸ್ತ್ಯಾದಿಗಳನ್ನು ಮಂತ್ರಿ ಮೊದಲಾದವರನ್ನೂ ಒಪ್ಪಿಸಿ ಸೀತೆಯನ್ನು ವಾಲ್ಮೀಕ್ಯಾಶ್ರಮದಬಳಿಯಲ್ಲಿ ಬಿಟ್ಟುಬಾರೆಂದು ಲಕ್ಷ್ಮಣನಿಗೆ ಹೇಳಿದನು. ನಿರೂಪಿಸು ಎಂಬುದಕ್ಕೆ ತದ್ಭವದಲ್ಲಿ ನಿರವಿಸು ಎಂದಾಗುವುದು.

(೪೮) ಬಯಕೆಯ ನೆವದಿ — ಸೀತಾದೇವಿಯು "ಕೆಲವುದಿನಗಳು ಋಷ್ಯಾಶ್ರಮಗಳಿಗೆ ಹೋಗಿ ಅವರ ದರ್ಶನಮಾಡಿಕೊಂಡು ಬರಬೇಕೆಂಬ ಅಪೇಕ್ಷೆ ಇದೆ." ಎಂದು ಶ್ರೀರಾಮನೊಡನೆ ಹೇಳಿ

ಯುವತಿಯನು ತಾಪಸವನು ಮುನಿಸಂ ।
ತವಿಸಿ ಬಳಿಕಾ ಪುಣ್ಯಚರಿತೆಯ ।
ಭುವನಮಾತೆಯನುಪಚರಿಸಿಕೊಂಡಿರ್ದ ನೊಲವಿನಲಿ ॥ ೪೮ ॥

ತಿಂಗಳೇಳರ ಗರ್ಭದಲಿ ರಘು ।
ಪುಂಗವನ ನಗಲಿದಳು ಮೇಲಣ ।
ತಿಂಗಳೆರಡಕೆ ಪೂರ್ಣವಾದುದು ಗರ್ಭವವನಿಜೆಯ ॥
ಮಂಗಳ ಗ್ರಹತಾರೆ ಶುಭಲ ।
ಗ್ನಂಗಳಲಿ ಮುನಿಮಂದಿರದಲಿ ಕು ।
ರಂಗಲೋಚನೆ ಪಡೆದಳಿಬ್ಬರ ವರಕುಮಾರಕರ ॥ ೪೯ ॥

ಆಕುಮಾರರಿ ಗೊಲವಿನಲಿ ವಾ ।
ಲ್ಮೀಕಿ ವಿಸ್ತರಿಸಿದನು ವೈದಿಕ ।
ಲೌಕಿಕೋತ್ಸವದಿಂದ ನಿಜನಾಮಾಭಿರಂಜಕವ ॥
ಲೋಕವಿಭು ಕುಶನೆಂದು ಮೊದಲು ವಿ ।
ವೇಕಿಪದನೆರಡನೆಯ ಶಿಶುಶೋ ।
ಭಾಕಲಿತ ಲವನೆಂದು ಕರೆದನು ಕಾಂತೆ ಕೇಳೆಂದ ॥ ೫೦ ॥

ಆದುವೆಂಟಬುದಂಗಳಿಬ್ಬರಿ ।
ಗಾದಿನಕೆ ತನ್ಮುನಿಪನುಪನಯ ।
ನಾದಿ ಕರ್ಮವರಚಿಸಿ ಶಾಸ್ತ್ರಾಭ್ಯಾಸ ಶಿಕ್ಷೆಯಲಿ ॥

ಮ್ಮದನ್ನೇ ಸೇವೆಮಾಡಿಕೊಂಡು, ಆ ಪತಿಭಕ್ತೆಯನ್ನು — ಪತಿಭಕ್ತಿಯುಳ್ಳ ಸೀತೆಯನ್ನು. ಉಯ್-ಕರೆದುಕೊಂಡುಹೋಗು, ಎಂಬ ಧಾತುವು ದಕ್ಷಿಣಮಾರ್ಗದಲ್ಲಿದೆ. ಉತ್ತರಮಾರ್ಗದಲ್ಲಿ 'ಒಯ್', ಎಂಬ ಧಾತುವಾಗಿ ಉಪಯೋಗಿಸಿದ್ದಾನೆ (ಒಯ್ + ದು). ತ್ಸ — ಪುಣ್ಯ, ದ್ಭ — ಹೂನ್ಯ;

(೪೯) ರಘುಗಳಲ್ಲಿ ಪುಂಗವ-ರಘುಪುಂಗವ(ಸ. ತ) ಪುಂಗವ — ಹೋರಿ (ಶ್ರೇಷ್ಠ). ಮಂಗಳ ಗ್ರಹತಾರೆ ಶುಭಲಗ್ನಂಗಳಲಿ — ಶುಭಗ್ರಹವಿರುವ ನಕ್ಷತ್ರ, ಮತ್ತು ಲಗ್ನಗಳಲ್ಲಿ. ಕುರಂಗಲೋಚನೆ-ಜಿಂಕೆಯ (ಕಣ್ಣಿನಂತೆ), ಕಣ್ಣುಳ್ಳವಳು. ತ್ಸ — ಕುಮಾರ, ದ್ಭ — ಕುವರ

(೫೦) ವೈದಿಕ ಲೌಕಿಕೋತ್ಸವದಿಂದ — ವೇದೋಕ್ತವಾದ ಶಾಂತಿಕರ್ಮಗಳಿಂದಲೂ, ಲೌಕಿಕವಾದ ಗೃಹಾಲಂಕಾರ, ವಾದ್ಯ ಮೊದಲಾದ ವೈಭವದಿಂದಲೂ. ನಿಜನಾಮಾಭಿರಂಜಕವ — ಅಂಕಿತನಾಮವನ್ನು. ನಾಮಕರಣದಲ್ಲಿ ನಿಜನಾಮವಲ್ಲದೆ ಮಾಸನಾಮ, ನಕ್ಷತ್ರನಾಮಗಳೆಂದು, ಎರಡು ಹೆಸರುಗಳನ್ನು ಇಡುವುದು ಪದ್ಧತಿ, ಅವನ್ನು ವ್ಯವಹಾರದಲ್ಲಿ ಉಪಯೋಗಿಸುವುದಿಲ್ಲ.

(೫೧) ಅಬುದ — ಸಂವತ್ಸರ, ಇದಕ್ಕೆ ತತ್ಸಮ. ಅಬ್ದ. ಉಪ — ಸಮೀಪಕ್ಕೆ, ನಯನ-ಕರೆದುಕೊಳ್ಳುವುದು; ಜ್ಞಾನೋಪದೇಶಕಕ್ಕಾಗಿ ತನ್ನ ಬಳಿಗೆ ಕರೆದುಕೊಳ್ಳುವ ಒಂದು ಕರ್ಮಕ್ಕೆ ಉಪನಯನ

ವೇದಶಾಸ್ತ್ರಂಗಳಲಿ ತನ್ನೋ ।
ಪಾದಿಯಲಿ ಮಾಡಿದನು ಸೀತಾ ।
ಹ್ಲಾದಕರ ದಿನಕರಕುಲದ ಕುಶಲವ ಕುಮಾರಕರ ॥ ೫೧ ॥

ಒಂದುದಿನ ಬಳಿಕವರು ಮುನಿಗಭಿ ।
ವಂದನಂಗೆಯ್ದುಚಿತವಚನದ ।
ಲೆಂದರೆಲೆ ಮುನಿನಾಥ ಚಿತ್ತೈಸೆಮ್ಮನನು ಪಡೆದ ॥
ತಂದೆಯಾರೆಮ್ಮನ್ವಯವದೇ ।
ನೆಂದು ಬಿನ್ನಹ ಮಾಡೆ ಮುನಿ ಸಾ ।
ನಂದದಲಿ ಹೇಳಲಿಕೆ ತೊಡಗಿದ ನೀಮಹಾ ಕಥೆಯ ॥ ೫೨ ॥

ಜನಿಸಿದನು ಮಾನಸದೊಳಬ್ಜಾ ।
ಸನನ ಪೂರ್ವದ ಸೃಷ್ಟಿಯಲಿ ನೂ ।
ತನ ವಿರಿಂಚಿಮರೀಚಿಮುನಿ ತನ್ಮನಿಪನಿಂ ಬಳಿಕ ॥
ಜನಿಸಿದನು ಕಶ್ಯಪನು ಕಶ್ಯಪ ।
ಮುನಿಯುದೆಸೆಯಿಂ ದಾದುದೀ ಮೇ ।
ದಿನಿಯ ವಿಸ್ತರವೆಂದು ಮುನಿನುಡಿದನು ಕುಮಾರರಿಗೆ ॥ ೫೩ ॥

ವೆಂದು ಹೆಸರು. ಓಪಾದಿಯಲಿ ಎಂಬುದು ಉಪಮಾನಾರ್ಥಕವಾದ ತದ್ಧಿತಪ್ರತ್ಯಯ. ಇದು ಸಪ್ತಮೀ ವಿಭಕ್ತಿಯಮೇಲೆ ಸೇರುವುದು. ಉದಾ. ತನ್ನೋಪಾದಿಯಲಿ; ದಿನ — ಹಗಲನ್ನು, ಕರ — ಮಾಡುವವನು — ದಿನಕರ (ಸೂರ್ಯ)

(೫೨) ಎಮ್ಮನ್ವಯವದೇನು — ನಮ್ಮ ವಂಶವಾವುದು. ಬಿನ್ನಹ ಎಂಬುದಕ್ಕೆ 'ವಿಜ್ಞಾಪನಾ' ಎಂಬುದು ತತ್ಸಮ; ಅಲ್ಕೆ ಎಂಬ ಪ್ರತ್ಯಯವು ಉತ್ತರಮಾರ್ಗದಲ್ಲಿ ಅಲಿಕೆ ಎಂದಾಗುವುದು. ಈ ಮಹಾಕಥೆಯ — ಈ ದೊಡ್ಡಕಥೆಯನ್ನು (ರಾಮಾಯಣದ ಕಥೆಯನ್ನು)

(೫೩) ಅನ್ವಯಃ—ಅಬ್ಜಾಸನನ ಮಾನಸದೊಳ್ ನೂತನವಿರಂಚಿ ಮರೀಚಿಮುನಿ ಪೂರ್ವದ ಸೃಷ್ಟಿಯಲಿ ಜನಿಸಿದನು. ಬ್ರಹ್ಮನಿಗೆ ಮರೀಚಿಬ್ರಹ್ಮನು ಮಾನಸಪುತ್ರನಾಗಿ ಹುಟ್ಟಿದನು. ಕಶ್ಯಪಮುನಿಯ ದೆಸೆಯಿಂದ ಈ ಮೇದಿನಿಯವಿಸ್ತಾರವು ಆದುದು. ಕಶ್ಯಪನಿಗೆ ದಿತಿ, ಅದಿತಿ, ಕದ್ರು, ವಿನತೆ ಮೊದಲಾದ ಅನೇಕಮಂದಿ ಹೆಂಡತಿಯರಿದ್ದರು. ಅವರಲ್ಲಿ ದೇವತೆಗಳು, ರಾಕ್ಷಸರು, ಸರ್ಪ, ಪಕ್ಷಿ ಮೊದಲಾದ ಸಮಸ್ತಜಾತಿಯ ಪ್ರಾಣಿಗಳೂ ಹುಟ್ಟಿದುದರಿಂದ ಪ್ರಪಂಚವು ಬೆಳೆಯಿತು. ಮೇದಿನಿ — (ಮಧುಕೈಟಭರೆಂಬ) ರಾಕ್ಷಸರ ಮೇದಸ್ಸಿನಿಂದ ಆದುದು ಮೇದಿನಿ (ಭೂಮಿ)

ಆಮಹಾಮುನಿವರನ ಬಸುರಲಿ ।
ತಾಮರಸ ಸಖನುದಿಸಿದನು ಬಳಿ ।
ಕಾ ಮಹೋತ್ಪಲ ಬಾಂಧವಂಗಾಮನುಮಹೀಪಾಲ ॥
ಭೂಮಿಯಲಿ ಜನಿಸಿದನು ನಿಗಮ ।
ಸ್ತೋಮಕಾದಿ ಪ್ರಣವದವೊಲು ।
ದ್ದಾಮ ಕುಕ್ಷಿನೃಪಾಲ ಜನಿಸಿದನಾಮಹೀಪತಿಗೆ ॥ ೫೪ ॥

ಕೇಳಿದೈ ಕುಶ! ಬಳಿಕ ಕುಕ್ಷಿನೃ ।
ಪಾಲನಿಂದಿತ್ತಲು ವಿಕುಕ್ಷಿನೃ ।
ಪಾಲನರಸಾದನು ಕಣಾ ಲವ ಕೇಳು ಭೂತಳಕೆ ॥
ಮೇಲೆ ತನ್ನೃಪಗರ್ಭವರ ವರು ।
ಣಾಲಯದೊಳುದ್ಭವಿಸಿದನು ಭೂ ।
ಪಾಲ ಚೂಡಾರತ್ನನಮಳೇಕ್ಷ್ವಾಕು ನಾಮದಲಿ ॥ ೫೫ ॥

ಆಪರಂಪರೆ ಯನ್ವಯದಲಿ ದಿ ।
ಲೀಪನೃಪ ಸಂಭವಿಸಿ ಸಪ್ತ ।
ದ್ವೀಪಕಧಿಪತಿಯಾದನಲ್ಲಿಂ ಮೇಲೆ ರಘುವೆಂಬ ॥
ಭೂಪ ನಾಳಿದ ನವನಿಯನು ರಾ ।
ಜೋಪಲಾಲಿತಧರ್ಮಮಾರ್ಗದ ।
ಲಾಪರಂತಪ ನಾದನಾತ್ಮಜನಜಮಹೀಪಾಲ ॥ ೫೬ ॥

(೫೪) ತ್ಸ — ತಾಮರಸ, ದ್ಭ — ತಾವರೆ, ಮಹೋತ್ಪಲ — ಕಮಲಕ್ಕೆ, ಬಾಂಧವ-ಬಂಧುವಾದವನು (ಸೂರ್ಯ) ಕಶ್ಯಪನಮಗ — ಸೂರ್ಯ, ಸೂರ್ಯನಮಗ — ಮನು, ಮನುವಿನಮಗ — ಕುಕ್ಷಿ.

(೫೫) ವರುಣ — ವರುಣನೆಂಬ ದಿಕ್ಪಾಲಕನ, ಆಲಯ — ಮನೆ (ಸಮುದ್ರ), ತನ್ನೃಪ ಗರ್ಭವರ ವರುಣಾಲಯದೊಳ್ — ಆ ದೊರೆಯ ಗರ್ಭವೆಂಬ ಶ್ರೇಷ್ಠವಾದ ಸಮುದ್ರದಲ್ಲಿ, ಕುಕ್ಷಿಗೆ ವಿಕುಕ್ಷಿಯೂ ವಿಕುಕ್ಷಿಗೆ ಇಕ್ಷ್ವಾಕುವೂ ಮಕ್ಕಳಾಗಿ ಹುಟ್ಟಿದರು.

ನೃಪಾಲನು + ಅರಸು + ಆದನು.

(೫೬) ಆ ಪರಂಪರೆಯನ್ವಯದಲಿ — ಕಶ್ಯಪನ ಮನೆತನದವರ ವಂಶಾನುಕ್ರಮದಲ್ಲಿ. ರಾಜೋಪಲಾಲಿತ ಧರ್ಮಮಾರ್ಗದಲಿ| ದೊರೆಗಳೆಲ್ಲರೂ ಹೊಗಳುವಂತಿರುವ ನ್ಯಾಯಮಾರ್ಗದಲ್ಲಿ. ಪರಂತಪ — ಶತ್ರುಗಳನ್ನು ಸಂಕಟಪಡಿಸತಕ್ಕವನು. ದ್ವೀಪಕ್ಕೆ — ದ್ವೀಪ — ದೀವ. ಸಪ್ತದ್ವೀಪಗಳು-ಜಂಬು, ಪ್ಲಕ್ಷ, ಕುಶ, ಕ್ರೌಂಚ, ಶಾಕ, ಶಾಲ್ಮಲಿ, ಪುಷ್ಕರ. ಭೂ — ಭೂಮಿಯನ್ನು, ಭುಜರು — ಅನುಭವಿಸುವವರು (ದೊರೆಗಳು)

ಅಜನೃಪಾಲಕನ ರಸುತನಭೂ ।
ಭುಜರ ಮಿಕ್ಕುದು ಪೂರ್ವದಮುಳಾಂ ।
ಬುಜ ಸಖಾನ್ವಯ ದಮೃತಕರವಂಶಾಧಿಜಾತಕದ ॥
ಭುಜಪರಾಕ್ರಮ ಚಕ್ರಿಯನು ದಿಗು ।
ವಿಜಯ ವಿಕ್ರಮ ಶಕ್ರನನು ನೃಪ ।
ಸೃಜಿಸಿದನು ನಿಜಮಹಿಳೆಯಲಿ ದಶರಥ ಮಹೀಪತಿಯ ॥ ೫೭ ॥

ದಾಶರಥಿಸುತ ಕೇಳು ಬಳಿಕೀ ।
ಕೋಸಲದನೃಪಸುತೆಯ ಮಗಧಮ ।
ಹೀಶತನುಜೆಯ ಕೇಕಯಕ್ಷ್ಮಾಪಾಲನಂದನೆಯ ॥
ಆಸುತಗೆ ಪರಿಣಯವ ಮಾಡಿ ಮ ।
ಹೀಶ ಪಟ್ಟವ ಕಟ್ಟಿ ಸಾರ್ದನು ।
ವಾಸವನಗದ್ದುಗೆಗೆ ತಾ ನಂದಾ ಮಹೀಪಾಲ ॥ ೫೮ ॥

ಬಳಿಕ ನಿಂದುದು ರಾಜ್ಯಲಕ್ಷ್ಮಿಯ ।
ವಿಳಸದಭಿನವತೇಜ ದಿಙ್ಮಂ ।
ಡಲ ಪರೀತ ಪುರಂದರನ ವೈಭವಕೆ ಮಿಗಿಲೆನಿಸಿ ॥
ಇಳೆಯೊಳಿನ್ನಾರಧಿಕರವನಿಪ ।
ತಿಲಕರಲಿ ಷೋಡಶನೃಪಾಲರ ।
ನುಳಿದವರಹೇಳದಿರು ನಿಮ್ಮ ವೊಲೆಂದನಾ ಮುನಿಪ ॥ ೫೯ ॥

(೫೭) ಅಮೃತ _ ಅಮೃತದ, ಕರ _ ಕಿರಣವುಳ್ಳವನು (ಚಂದ್ರ). ಭುಜಪರಾಕ್ರಮ ಚಕ್ರಿ _ ಬಾಹುಬಲದಲ್ಲಿ ವಿಷ್ಣುವಿನಂತಿರುವ. ದಿಗುವಿಜಯವಿಕ್ರಮಶಕ್ರನನು _ ದಿಗ್ವಿಜಯಮಾಡುವ ಸಾಮರ್ಥ್ಯದಲ್ಲಿ ಇಂದ್ರನಂತಿರುವ.

(೫೮) ಮಗಧಮಹೀಶ ತನುಜೆ _ ಮಗಧರಾಜನ ಮಗಳು(ಸುಮಿತ್ರೆ). ಆ ಮಹೀಪಾಲ ಅಂದು ವಾಸವನ ಗದ್ದುಗೆಗೆ ತೆರಳಿದನು _ ಆ ಅಜಮಹಾರಾಜನು ಇಂದ್ರನ ಸಿಂಹಾಸನಕ್ಕೆ ಹೋದನು(ಸ್ವರ್ಗಸ್ಥನಾದನು). ಕ್ಷ್ಮಾ _ ಭೂಮಿಯನ್ನು, ಪಾಲ _ ಆಳತಕ್ಕವನು (ದೊರೆ)

(೫೯) ಅನ್ವಯ-ಬಳಿಕ ದಿಙ್ಮಂಡಲಪರೀತ ರಾಜ್ಯಲಕ್ಷ್ಮಿಯು ವಿಳಸದಭಿನವತೇಜ ಪುರಂಧರನ ವೈಭವಕೆ ಮಿಗಿಲೆನಿಸಿ ನಿಂದುದು. ಷೋಡಶನೃಪಾಲನ + ಉಳಿದು + ಅವರ; ಷೋಡಶನೃಪಾಲರು:-ಮಾಂಧಾತ, ಭಗೀರಥ, ಸಗರ, ಕಕುತ್ಸ್ಥ, ರಘು, ಪೂರು, ಪುರೂರವ, ಶಿಬಿ, ರುಕ್ಮಾಂಗದ, ಜನಕ, ನಹುಷ, ಕಾರ್ತವೀರ್ಯಾರ್ಜುನ, ಯಯಾತಿ, ನಳ, ಅರ್ಜುನ, ರಾಮ.

ಶಿಶುತನದಲಿ ಸಮಸ್ತವಿದ್ಯಾ ।
ವ್ಯಸನಿಗಳು ಯೌವನದ ಲನುಭವ।
ವಿಷಯಿಗಳು ಮುಪ್ಪಿನಲಿಮುನಿಮಾರ್ಗಾನುವರ್ತಿಗಳು ॥
ಅಸುಪರಿತ್ಯಾಗದಲಿ ಯೋಗದ ।
ಬೆಸುಗೆಗಳ ಮಾಡುವರು ಕೇಳ್ಳೈ ।
ಕುಶನೆ ನಿಮ್ಮನ್ವಯದ ರಾಯರು ಲವನೆಕೇಳೆಂದ ॥ ೬೦ ॥

ಕುಲದಲಧಿಕರು ಕೀರ್ತಿಯಲಿ ವೆ ।
ಗ್ಗಳರು ಕರ್ಮಫಲಂಗಳಲಿ ಸಂ ।
ಮಿಳಿತ ರಂಘೋಣಾತಿಪರಿವೃತ ಧಾತ್ರಿವಲ್ಲಭರು ॥
ಬಲವಿರೋಧಿಸಹಾಯ ಶೌರ್ಯ ।
ಕಲಿತ ದಿನಕುಲದವನಿಪಾಲಕ ।
ತಿಲಕ ರವರಿಂದೀ ಮಹೀಪತಿ ಹತ್ತುಮಡಿಯೆಂದ ॥ ೬೧ ॥

ಚರಿಸುವುದು ರಥವೊಂದು ವಾಣೀ ।
ವರನ ಪುರಕಿಂದ್ರಾಗ್ನಿ ಯಮಕ ।
ರ್ಬುರ ವರುಣವಾಯವ್ಯ ಕೌಬೇರೇಶ ಪುರಗಳಿಗೆ ॥

(೬೦) ಅನುಭವವಿಷಯಿಗಳು-ವಿಷಯಸುಖಗಳನ್ನು ಅನುಭವಿಸುವವರು. ಅಸುಪರಿತ್ಯಾಗದಲ್ಲಿ ಯೋಗದ ಬೆಸುಗೆಗಳಮಾಡುವರು-ಯೋಗಾಭ್ಯಾಸವನ್ನು ಮಾಡಿ ಆ ಯೋಗದ ಬಲದಿಂದಲೇ ಪ್ರಾಣವನ್ನೂ ದೇಹವನ್ನೂ ಪ್ರತ್ಯೇಕಿಸುವರು ಎಂಬುದು ಭಾವ. ಈ ಪದ್ಯವು ರಘುವಂಶದ "ಶೈಶವೇಽಭ್ಯಸ್ತವಿದ್ಯಾನಾಂ ಯೌವನೇ ವಿಷಯೈಷಿಣಾಂ। ವಾರ್ಧಕೇ ಮುನಿವೃತ್ತೀನಾಂ ಯೋಗೇನಾಂತೇ ತನುತ್ಯಜಾಂ॥ ಎಂಬ ಶ್ಲೋಕದ ಪರಿವರ್ತನೆಯಾಗಿದೆ.

(೬೧) ಕರ್ಮಫಲಂಗಳಲ್ಲಿ ಸಮ್ಮಿಳಿತರು _ ಕಷ್ಟಸುಖಗಳಲ್ಲಿ ಮನಸ್ಸನ್ನು ಒಂದೇರೀತಿಯಾಗಿ ಇಟ್ಟುಕೊಂಡು ವಿಕಾರವನ್ನು ಹೊಂದದೆ ನಿರ್ಲಿಪ್ತರಾಗಿರುವವರು (ಅತಿಯಾದ ಸುಖದುಃಖಕ್ಕೊಳಗಾಗದವರು.) ಬಲ _ ಬಲನೆಂಬ ರಾಕ್ಷಸನಿಗೆ, ವಿರೋಧಿ _ ಶತ್ರು. (ಇಂದ್ರ)

ಬಲವಿರೋಧಿ ಸಹಾಯಶೌರ್ಯ ಕಲಿತರು _ ಇಂದ್ರನಿಗೆ ಯುದ್ಧದಲ್ಲಿ ಸಹಾಯಮಾಡುವಷ್ಟು ಪರಾಕ್ರಮವುಳ್ಳವರು.

ಹತ್ತು _ ದಕ್ಷಿಣಮಾರ್ಗದ ಕನ್ನಡದ ಕೆಲವುಶಬ್ದಗಳ ಪಕಾರಕ್ಕೆ ಉತ್ತರಮಾರ್ಗದಲ್ಲಿ ಹಕಾರಾದೇಶವು ಬರುವುದು. ಉ:-ಪತ್ತು _ ಹತ್ತು, ಪುಳು _ ಹುಳು, ಪುಲ್ _ ಹುಲ್ಲು;

(೬೨) ಕರ್ಬುರ _ ರಾಕ್ಷಸ, ಇಲ್ಲಿ ನಿರ್‌ೃತಿ. ಗುಣನಾಮ _ ಅನ್ವರ್ಥನಾಮ, ಅಷ್ಟ

ಉರಗರಾಜನ ನಗರಿಗದರಿಂ ।
ಧರೆಯೊಳಗೆ ಹೆಸರಾದುದಾ ಭೂ ।
ವರ ಶಿರೋರತ್ನಂಗೆ ದಶರಥ ನೆಂಬ ಗುಣನಾಮ ॥ ೬೨ ॥

ತೆರುವರೀತಗೆ ಕಪ್ಪವನು ಸಾ ।
ಗರಪರೀ ತಸಮಸ್ತ ಪೃಥ್ವೀ ।
ಶ್ವರರು ಪುರುಹೂತಾದಿ ನಾನಾ ಲೋಕಪಾಲಕರು ॥
ನರಭುಜಂಗಮರಾಯರಾ ದಶ ।
ಶಿರನತಪ್ಪಿಸಿ ಖಂಡೆಯದ ಮೆ ।
ಯ್ಸಿರಿಯದೆಂತುಟೊ ನಿಮ್ಮ ದಶರಥಸಾರ್ವಭೌಮಕನ ॥ ೬೩ ॥

ಹಗಲು ಸಂಧ್ಯಾರಾಗದೆಸಕದ ।
ಬಗೆಯ ವಿಭ್ರಾಂತಿಯಲಿ ನೀರಜ ।
ಮುಗಿವುವಾಶಾಜನಿತ ದಾವಜ್ವಾಲೆಯೆಂದಳುಕಿ ॥
ದಿಗಿಭವಂಜುವುವರಿನೃಪರು ಮೆ ।
ಯ್ದೆಗೆವರುಲ್ಕಾಪಾತ ಭೀತಿಯ ।
ಬಿಗುಹಿನಲಿ ಬಹುಳಪ್ರತಾಪವದೆಂತೊ ದಶರಥನ ॥ ೬೪ ॥

ಶರಧಿಪರಿವೃತ ವಳಯದವನೀ ।
ಶ್ವರರ ಮುಕುಟಮರೀಚಿ ಮಂಜರಿ ।
ಚರಣನಖಮುಕುರಂಗಳಲಿ ಬಿಂಬಿಸುವುದನವರತ ॥

ದಿಕ್ಪಾಲಕರ ಆ ಪಟ್ಟಣಗಳಿಗೂ, ಬ್ರಹ್ಮ. ಆದಿಶೇಷ ಇವರ ಪುರಗಳಿಗೂ ರಥದಲ್ಲಿ ಸಂಚರಿಸತಕ್ಕವನಾದುದರಿಂದ ದಶರಥನೆಂಬ ಹೆಸರುಬಂತು.

(೬೩) ಪುರು _ ಬಹುವಾಗಿ, ಹೂತ _ (ಯಜ್ಞದಲ್ಲಿ) ಕರೆಯಲ್ಪಡುವನು (ಹೋಮ ಮಾಡಲ್ಪಡುವನು) ಪುರುಹೂತ (ಇಂದ್ರ)

(೬೪) ಭಾವಾರ್ಥ-ದಶರಥನ ಪ್ರತಾಪಜ್ವಾಲೆ ಲೋಕದಲ್ಲೆಲ್ಲ ಹರಡಿಕೊಂಡಿರಲು ಅದನ್ನು ನೋಡಿ, ಕಮಲಗಳು ಹಗಲಿನಲ್ಲಿಯೂ ಸಂಜೆಗೆಂಪೆಂಬ ಭ್ರಾಂತಿಯಿಂದ ಸೂರ್ಯನು ಮುಳುಗಿದನೆಂದರಿದು ಮುಚ್ಚಿಕೊಳ್ಳುವುವು; ದಿಗ್ಗಜಗಳು ದವಾಗ್ನಿಯು ಉರಿಯೆಂದು ಹೆದರುವುವು; ಶತ್ರುರಾಜರು ತಮಗೆ ಅಪಶಕುನ ಸೂಚಕವಾದ ಉಲ್ಕಾಪಾತವೆಂದು ಹೆದರಿ ಓಡುತ್ತಿರುವರು. ದಿಕ್ + ಇಭ _ ದಿಗಿಭ-ದಿಗ್ಗಜ. ಬಿಗುಹಿನಲಿ _ ಬಿಗುರ್ + ಪು ಬಿಗುರ್ಪು, ಎಂಬ ಕೃದ್ಭಾವನಾಮಕ್ಕೆ ಉತ್ತರವಾಗಿರುವ ಕನ್ನಡದಲ್ಲಿ ಬಿಗುಪು, ಎಂದಾಗಿ ಪಕಾರಕ್ಕೆ ಹಕಾರಾದೇಶವು ಬಂದು, ಬಿಗುಹು ಎಂಬ ಶಬ್ದವಾಗಿದೆ.

(೬೫) ಶರಧಿಪರಿವೃತವಳಯದ _ ಸಮುದ್ರದಿಂದ ಸುತ್ತಲ್ಪಟ್ಟುದು (ಭೂಮಿ) ಅವನೀಶ್ವರ.........ಬಿಂಬಿಸುವುದು _ ದೊರೆಗಳ ಕಿರೀಟಗಳ ರತ್ನಗಳ ಕಾಂತಿಯುಗುಂಪು (ದಶರಥನ) ಕಾಲಿನ

ಅರಿ ವಿಕಾರದಲಾವನೊಬ್ಬನು ॥
ಶಿರವ ನೆಗಹುವನಿಲ್ಲ ವೇನ ।
ಚ್ಚರಿಯೊ ಮಹದುದಿತಪ್ರತಾಪ ಪತಂಗವಂಶಜನ ॥ ೬೫ ॥

ಜಲಧಿ ವೊಗೆಯಲಿ ಮಹಿಯೊಳಿನಮಂ ।
ಡಲವು ಬೀಳಲಿ ಬಿಸುಡಲವನೀ ।
ತಳವ ನಾಶಾದಂತಿ ಧರೆಯೊಗ್ಗುಡಿಸಲಮರಾದ್ರಿ ॥
ಹೊಳಹುಕೆಡದಾ ನೃಪಸುಭಾಷಾ ।
ಕಲಿತ ಸತ್ಯಕೆ ನಿಮ್ಮ ಭಾಸ್ಕರ ।
ಕುಲಲಲಾಮಂ ಗಾರುಸರಿ ಸುರನರಭುಜಂಗರಲಿ ॥ ೬೬ ॥

ಧನಪತಿಯ ಸಿರಿ ವಾರಿಧರ ವಾ ।
ಹನನ ಭೋಗ ಸಮಿರಾರಣನ ಬಲ ।
ಮಿನನ ತೇಜ ವನೂನ ವಿತರಣ ಚಾರುಚಂದ್ರಮನ ॥
ವನಧಿಪನ ಗಾಂಭೀರ್ಯ ರವಿನಂ ।
ದನನ ನಡೆವಳಿ ಧರೆಯ ಸೈರಣೆ ।
ಯಿನಿತು ದಶರಥ ಸಾರ್ವಭೌಮಂಗಲ್ಲದಿಲ್ಲೆಂದ ॥ ೬೭ ॥

ಉಗುರುಗಳೆಂಬ ಕನ್ನಡಿಯಲ್ಲಿ ಪ್ರತಿಫಲಿಸುತ್ತಿದ್ದುವು. (ಎಲ್ಲರಾಜರೂ ಪಾದಾಕ್ರಾಂತರಾಗಿದ್ದರು.) ಅರಿವಿಕಾರದಲಿ _ ಶತ್ರುತ್ವವನ್ನು ತೋರಿಸಿಕೊಂಡು.

(೬೬) ಸಮುದ್ರ, ಭೂಮಿ, ಸೂರ್ಯ, ದಿಗ್ಗಜ, ಮೇರುಪರ್ವತ; ಇವು ಸತ್ಯಧರ್ಮಗಳಿಗೆ ಕಟ್ಟುಬಿದ್ದು ತಾವು ಚಲಿಸದೆ ತಮ್ಮತಮ್ಮ ಸ್ಥಳದಲ್ಲಿವೆ. ಅವು ತಮ್ಮ ಮರ್ಯಾದೆಯನ್ನು ಎಂದಿಗೂ ತಪ್ಪುವುದಿಲ್ಲ. ಒಂದುವೇಳೆ ಕಾಲಗತಿಯಿಂದ ಅವು ತಮ್ಮ ಮರ್ಯಾದೆಯನ್ನು ಬಿಟ್ಟು ಲೋಕವನ್ನೆಲ್ಲಾ ನಾಶಮಾಡುವುವಾದರೂ ದಶರಥನು ಸತ್ಯಭ್ರಷ್ಟನಾಗನು. ಎಂದರೆ ಅವುಗಳಗಿಂತಲೂ ಹೆಚ್ಚಾದ ಸತ್ಯಧರ್ಮಪರಾಯಣನು. ಅವನಿಗೆ ಸಮಾನ ಮೂರುಲೋಕದಲ್ಲಿಯೂ ಯಾರೂಇಲ್ಲವೆಂದು ಭಾವವು. ಆಶಾ-ದಿಕ್ಕುಗಳ, ದಂತಿ _ ಆನೆಗಳು. ಐರಾವತ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕ, ಇವು ಅಷ್ಟದಿಗ್ಗಜಗಳು.

(೬೭) ಧನ _ ನಿಧಿಗೆ, ಪತಿ _ ಒಡೆಯ (ಕುಬೇರ). ವಾರಿ _ ನೀರನ್ನು, ಧರ _ ಹೊತ್ತಿರುವುದು (ಮೇಘ) ಅದು ಯಾರಿಗೆ ವಾಹನವೋ ಅವನು ವಾರಿಧರವಾಹನ (ಇಂದ್ರ). ರವಿ _ ಸೂರ್ಯನ, ನಂದನ _ ಮಗ (ಶನಿ). ಸರ್ವಭೂಮಿಗೂ ಒಡೆಯ ಸಾರ್ವಭೌಮ (ಚಕ್ರವರ್ತಿ) ಅನೂನವಿತರಣ ಚಾರುಚಂದ್ರಮನ _ ಚಂದ್ರನಕಳೆಯೇ ಅಮೃತ, ಅದನ್ನು ದೇವತೆಗಳು ಪಾನಮಾಡಿ ತೃಪ್ತರಾಗುವರು. ತನಗಿರುವ ೧೬ ಅಮೃತಕಳೆಗಳನ್ನು ದೇವತೆಗಳಿಗೆ ದಾನಮಾಡುವುದರಿಂದ ಚಂದ್ರನಿಗೆ ಸಮಾನನಾದ ಉದಾರಿಯೇ ಇಲ್ಲ. ರವಿನಂದನನ ನಡೆವಳಿ _ ಧರ್ಮದೇವತೆಯಾದ ಯಮನು ಧರ್ಮವನ್ನು ಸ್ವಲ್ಪವೂ ಬಿಡದೆ ನಿಷ್ಕರ್ಷೆಯಿಂದ ನಡೆಯತಕ್ಕವನು, ಅದರಿಂದಲೇ ಅವನಿಗೆ ಯಮಧರ್ಮರಾಜನೆಂದು ಹೆಸರು.

ಹುಸಿ ನುಸುಳು ಡೊಳ್ಳಾಸ ಹಿಂಸಾ ।
ವ್ಯಸನವಾರಡಿ ಬಂಧ ದಳವುಳ ।
ವಸುರಭಯ ದುರ್ಭಿಕ್ಷ ನಾನಾವರ್ಣಸಂಮಿಶ್ರ ॥
ಹಿಸುಣ ಧರ್ಮದ್ರೋಹ ರುಜೆ ಕೈ ।
ಮುಸಕವಳಿವನ್ಯಾಯ ವೆಂಬಿವ ।
ರೆಸಕ ಹೊದ್ದದಯೋಧಿಪನ ಧರಣೀತಳಾಗ್ರದಲಿ ॥ ೧೮ ॥

ಮುಳಿಯರಿತರರ ಸಿರಿಗೆ ಹರಯದೊ ।
ಳಳಿಯರಾ ಪರವಾಯುವಿನ ಕ ।
ಟ್ಟಳೆಯೊಳಲ್ಲದೆ ನೋಡರನ್ಯ ವಧೂಜನಾವಳಿಯ ॥
ಕಲಸರ ಘಸಂಹತಿಯ ಸುಜನರ ।
ನಿಳಿಕೆ ಗಾಣ ರಸೂಯೆಯಲಿ ಮನ ।
ವೆಳಸ ರಲ್ಲಿಯ ವಿವಿಧ ವರ್ಣದ ವಿಷಯದಖಿಳಜನ ॥ ೧೯ ॥

ನಿಂದೆ ಹೊದ್ದದು ನಡವಳಿಯೊಳಾ ।
ಕುಂದು ಹೊಗದುಬ್ಬರ ದುಪಪ್ಲವ ।
ಸಂಧಿಸದು ನೃಪಬಾಧೆ ಬಾಧಿಸ ದಧಿಕದುರ್ಭಯದ ॥
ಬಂದಿ ಹೊಗದಾಸರು ವಿತಾಳಿಸಿ ।
ನಿಂದಿರದು ನೆಲೆಗೊಳ್ಳದಾ ಜನ ।
ವೃಂದದಲಿ ಕೆಟ್ಟಾಸೆ ದಶರಥನೃಪನ ರಾಜ್ಯದಲಿ ॥ ೨೦ ॥

(೧೮) ಅಯೋಧ್ಯಾಪ ಎಂಬುದಕ್ಕೆ ಅಯೋಧಿಪ, ಎಂಬುದನ್ನು ತದ್ಭವವಾಗಿ ಮಾಡಿಕೊಂಡು ಪ್ರಯೋಗಿಸಿರುವನು.

(೧೯) ಇಳಿಕೆಗಾಣರ್ _ ತಿರಸ್ಕಾರದಿಂದ ನೋಡರು (ಅಲಕ್ಷ್ಯವಾಗಿ ಕಾಣರು) ಇಳಿಕೆಯಿಂ ಕಾಣರ್ -- ಇಳಿಕೆಗಾಣರ್ (ಕ್ರಿ. ಸ.)

ಅನ್ವಯಃ ಅಲ್ಲಿಯ ವಿವಿಧವರ್ಣದ ವಿಷಯದ ಅಖಿಳಜನ ಇತರರ ಸಿರಿಗೆಮುಳಿಯರ್......ಮನ ವೆಳಸರ್; ಮೊದಲಿನ ೬ ವಾಕ್ಯಗಳಲ್ಲಿಯೂ ಅಖಿಳಜನ ಎಂಬ ಒಂದು ಕರ್ತೃಪದವು ಅನ್ವಯಿಸಿ ೬ ವಾಕ್ಯಗಳು ಪೂರ್ತಿಯಾಗಿವೆ.

ದಶರಥನರಾಜ್ಯದ ಪ್ರಜೆಗಳೆಲ್ಲರೂ ಧರ್ಮಾತ್ಮರು. ಅಧರ್ಮಪ್ರವರ್ತಕರಲ್ಲವೆಂಬುದು ಈ ಪದ್ಯದಿಂದ ತಿಳಿಯಬರುತ್ತದೆ.

(೨೦) ಅನ್ವಯ ದಶರಥನೃಪನ ರಾಜ್ಯದಲಿ _ ನಿಂದೆಹೊದ್ದದು, ನಡೆವಳಿಯೊಳ್ ಆ ಕುಂದು ಹೊಗದು, ಉಬ್ಬರದ ಉಪಪ್ಲವ ಸಂಧಿಸದು, ನೃಪಬಾಧೆ ಬಾಧಿಸದು, ಅಧಿಕದುರ್ಭಯದ ಬಂದಿಹೊಗದು, ಆಸರು ವಿತಾಳಿಸಿ ನಿಂದಿರದು, ಕೆಟ್ಟಾಸೆ ಆಜನವೃಂದದಲಿ ನೆಲೆಗೊಳ್ಳದು. ಭಾವಾರ್ಥ- ಪ್ರಜೆಗಳೆಲ್ಲರೂ ಧರ್ಮಪರರಾಗಿದ್ದುದರಿಂದ ಅವರಿಗೆ ಯಾವಬಾಧೆಯೂ ಇಲ್ಲದೆ ಸುಖವಾಗಿದ್ದರೆಂಬುದು ಈಪದ್ಯದಿಂದ ತೋರುತ್ತದೆ. ದಶರಥನೃಪನರಾಜ್ಯದಲಿ, ಎಂಬುದನ್ನು ೭ ವಾಕ್ಯಗಳಲ್ಲಿಯೂ ಬೇರೆಬೇರೆ ಅನ್ವಯಿಸಿಕೊಳ್ಳಬೇಕು.

ಇಳೆಯೊಳುಳ್ಳ ಸಮಸ್ತದೇಶಂ ।
ಗಳಿಗೆ ಮಂಗಳತರವಲೇ ಕೋ ।
ಸಲಮಹಾವನಿ ಕೋಸಲಾವತಿ ನೃಪಪುರಂಗಳಿಗೆ ॥
ತಿಲಕವಲ್ಲಾ ರಾಯರೊಳ ಗ ।
ಗ್ಗಳನಲಾ ದಶರಥನೃಪಾಲಕ ।
ನೆಲೆರಘುಕ್ಷಿತಿಪಾಲಸುತಕೇಳೆಂದು ಮುನಿನುಡಿದ ॥ ೭೧ ॥

ಸುರನರೋರಗ ಭುವನ ಲಕ್ಷ್ಮಿಯ ।
ಸುರುಚಿರದ ಮುಕ್ತಾಫಲದ ಬಂ ।
ಧುರದ ಕಾಂಚೀದಾಮದಂತಿರೆ ಸಕಲ ವಿಭವದಲಿ ॥
ಅರಸ ದಶರಥ ಚಕ್ರವರ್ತಿಯ ।
ಧರೆಯಪರಿವೃತ ಕೀರ್ತಿಲತೆ ವಿ ।
ಸ್ಫುರಿಸುತಿರ್ದುದು ಸಕಲ ಜನಪತಿಜನದ ಕಣ್ಮನಕೆ ॥ ೭೨ ॥

---

# ನಾಲ್ಕನೆಯಸಂಧಿ.

ಸೂಚನೆ ॥ ಲಲಿತ ಸಂತಾನಾಭಿವೃದ್ಧಿಯ ।
ನೆಲೆಗೆ ಬಳಲುವ ಭೂಪತಿಗೆ ಕೈ ।
ಕೊಳಿಸಿದನು ಕಾಮ್ಯಾಧ್ವರವನು ವಸಿಷ್ಠಮುನಿರಾಯ ॥

(೭೧) ಕೋಸಲಮಹಾವನಿ _ ದೊಡ್ಡದಾದ ಕೋಸಲದೇಶವು, ಕೋಸಲಾವತಿ _ ಅಯೋಧ್ಯಾಪುರವು, ಅಲೇ, ಅಲ್ಲಾ, ಅಲಾ ಎಂಬ ಶಬ್ದಗಳಲ್ಲಿರುವ ದೀರ್ಘಕಾಕುಗಳಿಂದ ಅಹುದು ಎಂಬ ಅರ್ಥವು ತೋರಬರುವುದು.

(೭೨) ಲೋಕತ್ರಯದ ಲಕ್ಷ್ಮೀದೇವಿಯು ನಡುವಿಗೆ ಹಾಕಿಕೊಂಡಿರುವ ಮುತ್ತಿನ ಒಡ್ಯಾಣ (ಡಾಬು) ವೋ ಎನ್ನುವಹಾಗೆ ದಶರಥನಕೀರ್ತಿಯು ಮೂರುಲೋಕಗಳಿಗೂ ವ್ಯಾಪಿಸಿತ್ತೆಂದು ಭಾವವು.

ಇಲ್ಲಿ ಲೋಕತ್ರಯಕ್ಕೂ ಲಕ್ಷ್ಮಿಗೂ, ಕೀರ್ತಿಗೂ ಬಳ್ಳಿಗೂ; ಅಭೇದವನ್ನು ಹೇಳಿರುವುದರಿಂದ ಅಭೇದರೂಪಕಾಲಂಕಾರವು. ಕೀರ್ತಿಲತೆಯು ಕಾಂಚಿದಾಮವೋ ಎನ್ನುವಹಾಗಿತ್ತೆಂದು, ಕೀರ್ತಿಲತೆ ಎಂಬುವಸ್ತುವನ್ನು ಕಾಂಚೀದಾಮವೆಂಬ ವಸ್ತುವೆಂದು ಉತ್ಪ್ರೇಕ್ಷಿಸಿರುವುದರಿಂದ ವಸ್ತೂತ್ಪ್ರೇಕ್ಷಾಲಂಕಾರವು.

ಕೇಳಿದೈ ಕುಶ ನಿಮ್ಮ ಮುತ್ತಯ ।
ನಾಳುತಿರ್ದನಯೋಧ್ಯೆಯನು ಚಿರ ।
ಕಾಲ ವೊಂದಾನೊಂದು ದಿನ ದರ್ಪಣದ ನೋಟದಲಿ ॥
ತಾಳಿದನು ಚಿಂತೆಯನು ಸಂತತ ।
ಮೇಲೆಮೇಲ್ಬೈತರ್ಪ ವಾರ್ಧಿಕ ।
ಕಾಲ ವಿಕೃತಕೆ ಕಲಿತ ಪಲಿತಜರಾತಿರೇಕದಲಿ ॥ ೨೩ ॥

ವ್ಯರ್ಥವಾಯ್ತು ಕಟಕಟ ಜನ್ಮನಿ ।
ರರ್ಥವಾಯ್ತು ನ್ವಯದಸಿರಿ ಪರ ।
ಮಾರ್ಥನಾಪುತ್ರಸ್ಯ ಲೋಕೋನಾಸ್ತಿಯೆಂಬುದದು ॥
ಸ್ವಾರ್ಥವಾಯ್ತೆನಗ ಧಿಕಸುಗತಿ ।
ಸ್ವಾರ್ಥಸಿದ್ಧಿಗೆ ಸಲ್ಲದವನಿಗ ।
ನರ್ಥಭಾಜನ ನಾದೆನೇ ತಾನೆಂದು ಬಿಸುಸುಯ್ದು ॥ ೨೪ ॥

ಮಕ್ಕಳಿಲ್ಲದ ಸಕಲಸಿರಿ ಶವ ।
ಕಿಕ್ಕಿದಖಿಳಾಭರಣವಿಭ್ರಮು ।
ಮಕ್ಕಳಿಲ್ಲದ ಸೊಬಗು ಪತಿಶೂನ್ಯಾಂಗನಾವಿಭವ ॥
ಮಕ್ಕಳಿಲ್ಲದ್ಯನಾರಿಯರು ನರ ।
ಕಕ್ಕೆ ಸಲುವರು ಗಡ ಮಹಾದೇ ।
ವಕ್ಕಟಾ ಕಡುಕೇಡುಕೆಟ್ಟೆನೆ ಶಿವಶಿವಾಯೆಂದ ॥ ೨೫ ॥

(೨೩) ಅನ್ವಯ-ಕಲಿತಪಲಿತಜರಾತಿರೇಕದಲಿ ಸಂತತಮೇಲೆ ಮೇಲ್ಬೈತರ್ಪ ವಾರ್ಧಿಕಕಾಲ ವಿಕೃತಕೆ ಚಿಂತೆಯನು ತಾಳಿದನು

ಉತ್ತರಮಾರ್ಗದಲ್ಲಿ ಕೆಲವು ಪದಗಳನ್ನು ದ್ವಿತ್ವಸಹಿತವಾಗಿಯೂ, ದ್ವಿತ್ವವಿಲ್ಲದೆಯೂ ಪ್ರಯೋಗಿಸುವುದುಂಟು. ಉ:-ಮುತ್ತಯ್ಯ-ಮುತ್ತಯ, ಹಣೆಗಣ್ಣ ದೃಷ್ಟಿ-ಹಣೆಗಣದೃಷ್ಟಿ, ಚಿಕ್ಕದೇವ-ಚಿಕದೇವ, ಅಡ್ಡಗಟ್ಟಿ-ಅಡಗಟ್ಟಿ, ಇತ್ಯಾದಿ.

(೨೪) ಅನ್ವಯ-ಅಕಟಕಟ! ಜನ್ಮ ವ್ಯರ್ಥವಾಯ್ತು, ಅನ್ವಯದಸಿರಿ ನಿರರ್ಥವಾಯ್ತು, ನಾಪುತ್ರಸ್ಯ ಲೋಕೋನಾಸ್ತಿ ಯೆಂಬುದು ಅದು ಪರಮಾರ್ಥ, ಎನಗೆ ಸ್ವಾರ್ಥವುಆಯ್ತು. ಸ್ವಾರ್ಥಸಿದ್ಧಿಗೆ ಅಧಿಕ ಸುಗತಿ ಸಲ್ಲದು, ತಾನು ಅವನಿಗೆ ಅನರ್ಥಭಾಜನನು ಆದೆನೇ ಎಂದು ಬಿಸುಸುಯ್ದು. ನಾಪುತ್ರಸ್ಯ ಲೋಕೋನಾಸ್ತಿ-ಮಕ್ಕಳಿಲ್ಲದವನಿಗೆ ಪುಣ್ಯಲೋಕವು ದೊರೆಯಲಾರದು.

ಭಾವಾರ್ಥ-ಇಹಪರಸುಖಗಳೆರಡೂ ದೊರೆಯದೆಹೋದುದರಿಂದ ನಾನು ಹುಟ್ಟಿದುದು ವ್ಯರ್ಥವಾಯ್ತು. ಕ್ರಮಕ್ರಮವಾಗಿ ಬಹುಕಾಲದಿಂದ ಬಂದ ಸಾಮ್ರಾಜ್ಯಕ್ಕೆ ದಿಕ್ಕಿಲ್ಲದಂತಾಯ್ತು. ಸ್ವಾರ್ಥಪರನಾದವನಿಗೆ ಸದ್ಗತಿ ಬರುವುದುಂಟೇ? ನಾನು ಸ್ವಾರ್ಥಪರನಾದೆನಲ್ಲದೆ, ಸಂತಾನಾಭಿವೃದ್ಧಿಯನ್ನು ಪಡೆದು ವಂಶೋದ್ಧಾರವನ್ನು ಮಾಡಲಿಲ್ಲ. ಹೀಗೆ ಅನರ್ಥಕ್ಕೆ ಕಾರಣನಾದೆನು, ಎಂದು ವ್ಯಥೆಪಟ್ಟನು.

(೨೫) ಪತಿಶೂನ್ಯಾಂಗನಾ-ಗಂಡನಿಲ್ಲದ ಹೆಂಗಸು, ಅನಾರಿಯ-ಷ್ಟ, ತ್ಸ-ಅನಾರ್ಯ; ಅನಾರಿಯರು-ನೀಚರು ಆರ್ಯರಲ್ಲದವರು (ಪೂಜ್ಯರಲ್ಲದವರು) ಅನಾರ್ಯರು.

ಏನುಗತಿ ನಿಜವಂಶವಂಧ್ಯಾ ।
ಮಾನಿನಿಗೆ ಪತಿಯಾದೆನೇ ಗತ ॥
ಸೂನು ವಿವನೆಂದೆನ್ನ ಹೊಗಿಸರು ಸಗ್ಗವನು ಸುರರು ॥
ಏನ ಮಾಡುವೆ ನೇನು ದಿಕ್ಕಿನ ।
ಗೇನು ಹದನೆಂದಳಲಿ ಬಳಲುವ ।
ಹೀನಧೈರ್ಯನನು ಪಚರಿಸಲು ವಸಿಷ್ಠನೈತಂದ ॥ ೭೬ ॥

ಭೂಮಿಜಾಸುತ ಕೇಳ್ವಸಿಷ್ಠ ಮು ।
ಹಾಮುನೀಂದ್ರನ ಕೂಡೆ ಬಂದರು ।
ವಾಮದೇವ ಮುನೀಂದ್ರಋಷಿಜಾಬಾಲಿಗಳು ಬಳಿಕ ॥
ವ್ಯೋಮಕೇಶ ವಿರಿಂಚಿಲಕ್ಷ್ಮೀ ।
ಧಾಮ ರಿವರೆನಗೆಂಬ ಭಾವದ ।
ಲಾಮಹಿಪ ನೆರಗಿದನು ತನ್ಮುನಿವರರ ಚರಣದಲಿ ॥ ೭೭ ॥

ನಿಮಿಸುತಾಸುತ ಕೇಳು ನಿಗಮ ।
ಕ್ರಮದ ಲಾಮುನಿವಂಶ ಲಕ್ಷ್ಮೀ ।
ರಮಣರನು ಸತ್ಕರಿಸಿದನು ಸನ್ಮಾನಪೂಜೆಯಲಿ ॥
ದ್ಯುಮಣಿವಂಶ ಲತಾಭಿವೃದ್ಧಿ ।
ಭ್ರಮೆಯ ಭೂಪನ ಕಂಡು ಕರುಣದ ।
ಮಮತೆ ಮಿಗೆ ಮಧುರೋಕ್ತಿಯಲಿ ನುಡಿಸಿದರು ನೃಪವರನ ॥ ೭೮ ॥

ಮೊಗದ ದುಗುಡ ವಿದೇನು ಮನದು ।
ಜ್ಬಿಗವಿದೇನ ಸುತಾಪಭೇದ ।
ಸ್ಥಗಿತ ಜಾಡ್ಯದ ಜಂಜಡ ವಿದೇನೆನುತ ಬೆಸಗೊಳಲು ।

(೭೬) ನಿಜವಂಶವಂಧ್ಯಾಮಾನಿನಿಗೆ - ತನ್ನ ವಂಶವೆಂಬ ಬಂಜೆಗೆ, ಪತಿಯಾದೆನು; ಎಂದರೆ ವಂಶಕ್ಕೆ ಮಕ್ಕಳಿಲ್ಲದೆ ನಷ್ಟವಾಗುವಹಾಗಾಯ್ತು. ಗತಸೂನು - ಗತವಾದ ಸೂನುವುಳ್ಳವನು ಯಾರೋ। ಅವನು (ಬ. ಪ್ರೀ. ಸ)

(೭೭) ವಸಿಷ್ಠ, ವಾಮದೇವ, ಜಾಬಾಲಿ - ಈ ಮೂವರು ಋಷಿಗಳನ್ನು ಸಾಕ್ಷಾತ್ ತ್ರಿಮೂರ್ತಿಗಳೆಂದು ಭಾವಿಸಿದನು. ವ್ಯೋಮ - ಆಕಾಶವೇ, ಕೇಶ - ಕೂದಲಾಗಿಉಳ್ಳವನು (ಈಶ್ವರ) ಲಕ್ಷ್ಮೀ - ಲಕ್ಷ್ಮೀದೇವಿಗೆ, ಧಾಮ - ಆಶ್ರಯನಾದವನು (ವಿಷ್ಣು) ಧಾಮ = ತೇಜಸ್ಸು, ಆಶ್ರಯ, ಮನೆ.

(೭೮) ನಿಮಿಸುತಾ - ಜನಕನಮಗಳಾದ ಸೀತೆಯ, ಸುತ - ಮಗನಾದ (ಕುಶನೇ) ದ್ಯು - ಆಕಾಶಕ್ಕೆ, ಮಣಿ - ರತ್ನದಂತೆ (ಪ್ರಕಾಶಮಾನನಾದವನು) - ದ್ಯುಮಣಿ (ಸೂರ್ಯ) ದ್ಯುಮಣಿವಂಶ ಲತಾಭಿವೃದ್ಧಿಭ್ರಮೆಯ - ಸೂರ್ಯವಂಶದ ಅಭಿವೃದ್ಧಿಯ ವಿಷಯದಲ್ಲಿ ಕುತೂಹಲಪಡುತ್ತಿರುವ.

(೭೯) ಉಜ್ಬಿಗ (ದ್ಭ) - ಉದ್ವೇಗ(ತ್ಸ) ಅಸುತಾಪ.........ಜಾಡ್ಯದ - ಒಂದುವಿಧವಾದ ಸ್ತ್ರಾ

ಉಗುವ ಕಂಬನಿಗಳಲಿ ಕಂಠದ ।
ಬಿಗಿದ ಸೆರೆಗಳ ಸೇದುವಕ್ಕೆಯ ।
ವಿಗತ ಪರಿಶೋಷಿತನು ಪಾವನತರರಿಗಿಂತೆಂದ । ॥ ೨೯ ॥

ಸುತವಿಹೀನರಿ ಗಿಲ್ಲಗಡ ಸುರ ।
ಪತಿಯ ಭದ್ರಾಸನ ಮಹಾಕ್ರತು ।
ಪತಿಗಳೋಳಿಗೆ ಸಲ್ಲರವರ್ಗಳು ಗಡ ಸು ಶಾಸ್ತ್ರದಲಿ ॥
ಗತಿ ಯದಾವುದು ತನಗೆ ವಂಶೋ ।
ನ್ನತಿಯ ಹೆಚ್ಚುಗೆಗೇನು ಹದನೆಂ ।
ದತಿಶಯದ ಖೇದದಲಿ ಕಂಬನಿದುಂಬಿದನು ಭೂಪ ॥ ೩೦ ॥

ಬಿಡದೆ ಬಂದಿನಕುಲದ ಸಿರಿಯಿಂ ।
ದೆಡೆವರಿವುದಿಕ್ಷ್ವಾಕುವಂಶದ ।
ಕಡಲು ಬರತುದು ಬೇರು ಬಿಟ್ಟುದು ರಘುಕುಲದ್ರುಮದ ॥
ನಡವಳಿಯ ಗುಣವೋ ಪುರಾಕೃತ ।
ದೊಡಲದುಷ್ಕೃತ ಫಲವೊ ತನಗೆಂ।
ದಡಿಗಡಿಗೆ ಮೂಗಕ್ಕೆಯಲಿ ಮರುಗಿದನು ನರನಾಥ ॥ ೩೧ ॥

ಹೊರೆದೆನಕಟಾ ತನುವನಿದ ಸೂ ।
ಕರನ ಶುನಕನವೋಲು ಕಾವಮಾ ।
ತುರದಿ ಮಿಗೆ ಕಣ್ಗಾಣದಾದೆನು ಸುಗತಿಸಂಪದಕೆ ॥
ಎರವಿಗನು ತಾನಾದೆನಿಹಪರ ।
ವೆರಡರಲಿ ಜೀವಾವಸಾನಕೆ ।
ಹೆರಹಿಕೊಂಬನಲಾ ಕೃತಾಂತಕನೆನುತ ಶೋಕಿಸಿದ ॥ ೩೨ ॥

ಸಂಕೋಚದಿಂದ ನೆಲಸಿರುವ ಆಲಸ್ಯದ. ಸೇದುವ + ಪಕ್ಕೆ - ಸೇದುವಕ್ಕೆ (ಗಮಕ)

(೩೦) ಸುತರಿಂದ ವಿಹೀನರು - ಸುತವಿಹೀನರು (ತೃ. ತ) ತನಗೆ ಸುಶಾಸ್ತ್ರದಲಿ ಗತಿಯದಾವುದು- ಅಪುತ್ರವಂತನಾದ ರಾಜನಿಗೆ ಇಂದ್ರಸಿಂಹಾಸನವು ದೊರೆಯುವುದಿಲ್ಲವೆಂದು ಶಾಸ್ತ್ರದಲ್ಲಿ ಹೇಳಿರುವುದರಿಂದ ನನಗೆ ಗತಿ ದೊರೆಯದಂತಾಗಿದೆ. ನನ್ನಂತಹರಿಗೆ ಶಾಸ್ತ್ರಗಳಲ್ಲಿ ಏನಾದರೂ ಗತಿಕಲ್ಪನೆಇದ್ದರೆ ತಿಳಿಸಿ.

(೩೧) ಬಿಡದೆ ಬಂದ ಇನಕುಲದ ಸಿರಿ, ಇಂದು ಎಡೆವರಿವುದು ಇಕ್ಷ್ವಾಕುವಂಶದ ಕಡಲು ಬರತುದು ರಘುಕುಲದ್ರುಮದ ಬೇರು ಬಿಟ್ಟುದು, ಎಂದನ್ವಯವು. ಎಡೆವರಿವುದು - ಬಿಟ್ಟುಹೋಗುವುದು, ಎಡೆಯಿಂ + ಪರಿ - ಎಡೆವರಿ, ಬರತುದು - ಬಣಗಿತು, ಮೂಗಕ್ಕೆ - ಮೂಗುನೋವು.

(೩೨) ಎರವಿಗನು - ಸಾಲಗಾರನು; ಎರವು + ಇಗ, ಎರವನ್ನು ಹೊತ್ತವನು; - ತದ್ಧಿತಾಂತ; ವಂಶವು ನಾಶವಾದುದರಿಂದ ಇಹಲೋಕದಸುಖವೂ, ಮಕ್ಕಳಿಲ್ಲದುದರಿಂದ ಸ್ವರ್ಗಸುಖವೂ, ತಪ್ಪಿತಾದುದರಿಂದ ಇಹಪರಗಳೆರಡರಲ್ಲಿಯೂ ಸಾಲಗಾರನಾಗಿ ದುಃಖಕ್ಕೆ ಗುರಿಯಾದೆನೆಂದು ದಶರಥನುಹೇಳಿಕೊಂಡನು

ಸಂತವಿಸು ರಾಜೇಂದ್ರ ಚಿತ್ತದ ।
ಚಿಂತೆಯಿದು ತಾನೈಸಲೇ ನಿನ ।
ಗಂತಕನ ಭಯವಿಲ್ಲ ಸಾಕಾ ಮಾತದಂತಿರಲಿ ॥
ಸಂತತಿಯ ಸೌಭಾಗ್ಯಸಿರಿಯ ನಿ ।
ತಾಂತಕಿದಲಾ ನಿನಗೆ ಸಪ್ತಸು ।
ತಂತು ನಿರುಪಮ ಪುತ್ರಕಾಮೇಷ್ಟಿ ಪ್ರಸಿದ್ಧಕವು ॥ ೮೩ ॥

ಇಷ್ಟವಹುದೆಲೆ ನೃಪತಿ ಕೇಳ್ಕಾ ।
ಮೇಷ್ಟಿಯಲಿ ನಿನಗಾವ ನೆನಹೇ ।
ನೆಷ್ಟು ದೊಡ್ಡಿತು ಬಿಡು ವೃಥಾಚಿಂತಾ ಮನೋವ್ಯಥೆಯ ॥
ಕಷ್ಟವೃತ್ತಿಯ ನೃಪನೆ ನೀಸುರ ।
ಶಿಷ್ಟಪದ ಸುರಪತಿಯ ಮಣಿಮಯ ।
ವಿಷ್ಟರದ ಸಿರಿ ಸೇರುವುದು ಸಂದೇಹವೇನಿದಕೆ ॥ ೮೪ ॥

ಎಂದು ಮೂವರು ಮುನಿಗಳ ಜನೃಪ ।
ನಂದನನ ಸುಬ್ಬರದ ಡುಗುಡದ ।
ಬಂಧನವ ಪರಿಹರಿಸಿ ಬಿಜಯಂಗೆಯ್ದರಾ ಶ್ರಮಕೆ ॥
ಕಂದ ಕೇಳೈ ಬಳಿಕ ಪರಮಾ ।
ನಂದವನು ಪಡೆದಾ ಮಹಿಪ ನರ ।
ವಿಂದನಾಭನ ಭಜಿಸಿದನು ನಿಜಭಾವಶುದ್ಧಿಯಲಿ ॥ ೮೫ ॥

———:O:———

(೮೩) ನಿನಗಂತಕನಭಯವಿಲ್ಲ-ನೀನು ನರಕಭಾಜನನಾಗುವುದಿಲ್ಲ; ಸಿರಿಯುನಿಕಾಂತಕೆ-ಐಶ್ವರ್ಯಾಭಿವೃದ್ಧಿಗೆ ನಿನಗೆ ಸಂತತಿಯು ಸೌಭಾಗ್ಯಸಿರಿಯು ನಿತಾಂತಕೆ ನಿರುಪಮ ಪುತ್ರಕಾಮೇಷ್ಟಿ ಪ್ರಸಿದ್ಧಕವು, ಸಪ್ತಸುತಂತು, ಇದು(ಕಾರಣವು) ಅಲಾ, ಎಂದು ಅನ್ವಯ. ಸೌಭಾಗ್ಯ (ತ್ಸ)-ಸೊಬಗು (ದ್ಭ)

(೮೪) ಸುರಶಿಷ್ಟಪದ-ದೇವತೆಗಳಿಂದ ಪೂಜಿತವಾದ ಪದವಿಯುಳ್ಳವನು. ಈ ಪದ್ಯದ ಪ್ರಾಸಸ್ಥಾನದಲ್ಲಿ (ಷ್ಟ) ಎಂಬ ವಿಜಾತೀಯ ಸಂಯುಕ್ತಾಕ್ಷರವು ಬಂದಿರುವುದರಿಂದ ಇದು ಶರಭಪ್ರಾಸವು.

(೮೫) ಅರ-ದಳಗಳನ್ನು, ವಿಂದ ಪಡೆದಿರತಕ್ಕದು-ಅರವಿಂದ (ಕಮಲ) ಅದನ್ನು ನಾಭಿಯಲ್ಲಿ ಉಳ್ಳವನು ಅಥವಾ ಅದರಂತೆ ನಾಭಿಯುಳ್ಳವನು (ವಿಷ್ಣು). ತನ್ನ ಹಿಂದೆ ಅನುಸ್ವಾರದೊಡನೆ ಕೂಡಿದ ವರ್ಣವು ಪ್ರಾಸವಾಗಿ ಬಂದಿರುವುದರಿಂದ ಈ ಪದ್ಯದಲ್ಲಿ ವೃಷಭಪ್ರಾಸವಿದೆ.

# ಐದನೆಯಸಂಧಿ.

ಸೂಚನೆ ॥ ರಾಯದಶರಥನೃಪತಿ ಗಖಿಳೋ ।
ಪಾಯಕುಶಲಸುಮಂತ್ರಕನು ಮುನಿ ।
ರಾಯ ರಾಜಿತಋಷ್ಯಶೃಂಗನ ಕಥೆಯವರ್ಣಿಸಿದ ॥

ಧರಣಿಜಾಸುತ ಕೇಳು ದಶರಥ ।
ಧರಣಿಪತಿ ರವಿಕುಲದ ಪಾರಂ ।
ಪರೆಯ ಪರಮಾಪ್ತಪ್ರಧಾನರ ಕರಿಸಿ ಮುನಿವರರ ॥
ಪರ ವಚೋಭಿಪ್ರಾಯ ಮತವಿ ।
ಸ್ತರಣಪನು ಸಿದ್ಧಾರ್ಥಮುಖ್ಯರಿ ।
ಗೊರೆದು ನಿಮ್ಮಭಿಮತ ವದೇನೆಂ ದರಸ ಬೆಸಗೊಂಡ ॥ ೮೬ ॥

ಕ್ರತುವ ಕೈಕೋ ಜೀಯ ಸತ್ಯ ।
ವ್ರತರಲಾ ನುಡಿ ತಪ್ಪುವುದೆ ಮುನಿ ।
ಪತಿ ವಸಿಷ್ಠರ ವಾಮದೇವ ಮಹಾತಪೋಧನರ ॥
ವಿತತಕಾಮ್ಯ ಮಹಾಧ್ವರಕೆ ದೀ ।
ಕ್ಷಿತನು ನೀನಾ ಗಖಿಳ ರಾಜ ।
ಪ್ರತತಿಯನು ಬರಿಸುವೆವು ತರಿಸುವೆ ವಖಿಳ ವಸ್ತುಗಳ ॥ ೮೭ ॥

ಎಣಿಕೆ ಯಾವುದು ಜೀಯ ಧರ್ಮದ ।
ಕಣಿಯಲಾ ನೀನಿನ್ನ ಭಾಗ್ಯಕೆ ।
ತೃಣಕಣಾ ಸ್ವರ್ಗಾದಿ ಭೋಗದ ಸಕಲಸೌಭಾಗ್ಯ ॥
ಗುಣಗಣಾಲಂಕೃತನು ಸುರಮುನಿ ।
ಗಣನತಾಂಘ್ರಿದ್ವಯನ ನಾರಾ ।
ಯಣನ ಕೃಪೆ ನಿನಗುಂಟೆನುತ ಕೊಂಡಾಡಿದರು ನೃಪನ ॥ ೮೮ ॥

(೮೬) ರವಿಕುಲದ ಪಾರಂಪರೆಯ ಪರಮಾಪ್ತಪ್ರಧಾನಕರ- ಸೂರ್ಯವಂಶದ ರಾಜರಿಗೆ ಕುಲಕ್ರಮವಾಗಿ ಆಪ್ತರಾದ ಮಂತ್ರಿಗಳನ್ನು.

(೮೭) ಅನ್ವಯ- ಜೀಯ ನೀನು ಕ್ರತುವಕೈಕೋ (ವಸಿಷ್ಠಾದಿಗಳು) ಸತ್ಯವ್ರತರಲ್ಲಾ, ಮುನಿ ವಸಿಷ್ಠರ ವಾಮದೇವ ಮಹಾ ತಪೋಧನರನುಡಿ ತಪ್ಪುವುದೆ? ನೀನು + ಆಗು + ಅಖಿಳ + ರಾಜಪ್ರತತಿಯನು,

(೮೮) ಸುರಮುನಿನತಾಂಘ್ರಿದ್ವಯನ- ದೇವತೆಗಳಿಂದಲೂ ನಮಸ್ಕರಿಸಲ್ಪಟ್ಟ ಪಾದಗಳುಳ್ಳ, ಅಂಘ್ರಿಗಳ ದ್ವಯವುಳ್ಳವನಾವನೋ ಅವನು ಅಂಘ್ರಿದ್ವಯನು (ಬ. ವ್ರೀ.) ನಾರ- ಜಲರಾಶಿಯೋ (ಕ್ಷೀರಸಮುದ್ರ), ಅಯನ- ವಾಸಸ್ಥಾನವಾಗಿಉಳ್ಳವನು- ನಾರಾಯಣ (ವಿಷ್ಣು)

ಬಳಿಕವರ ಮತದಿಂದ ಮನುಕುಲ ।
ತಿಲಕ ನತಿಸಂತೋಷದಲಿ ನಿ ।
ಶ್ಚಲತೆಯಲಿ ಕೈಕೊಂಡನಾ ಕಾಮಿತಮಹಾಧ್ವರವ ॥
ಕಳುಹಿದ ನು ನಯದಲಿ ಸುಮಂತ್ರನ ।
ನುಳಿಯೆ ಮಿಕ್ಕ ಮಹಾಪ್ರಧಾನಾ ।
ವಳಿಯ ನಾಪ್ತಾಲೋಚನೆಯ ಲಾಮಂತ್ರಿಗಿಂತೆಂದ ॥ ೮೯ ॥

ಎಲೆ ಸುಮಂತ್ರ ಸುಮಂತ್ರಮುಖದಲಿ ।
ಫಲಿಸುವುದೆ ಸುತಲಾಭ ವನ್ವಯ ।
ಲಲಿತಲತೆ ಕುಡಿಗೊಂಬುದೇ ಕಾಮೇಷ್ಟಿ ಯಜ್ಞದಲಿ ॥
ತೊಲಗಿ ದೆಮ್ಮ ನ್ವಯದ ರಾಜಾ ।
ವಳಿ ಯಲಹುದೇ ಪುತ್ರಸಂತತಿ ।
ಸುಲಭವಹುದೇ ನೆನಗೆನುತ ಬೆಸಗೊಂಡ ನಾಭೂಪ ॥ ೯೦ ॥

ಅರಸಕೇಳು ಸನತ್ಕುಮಾರನು ।
ಸರಸಿರುಹಸಂಭವನ ಸಭೆಯಲಿ ।
ಸುರಮುನೀಂದ್ರರ ಮಧ್ಯದಲಿ ನಿಮ್ಮನ್ವಯಾಗತದ ॥
ಪರಿವಿಡಿಯ ರಘುವಂಶವನು ವಿ ।
ಸ್ತರಿಸಿದನು ವಿಮಳಾಗ್ನಿವರ್ಣನ ।
ನಿರುಪಮ ಸಾಮ್ರಾಜ್ಯ ಪರಿಯಂತಾದಿ ಕಾಲದಲಿ ॥ ೯೧ ॥

ಮೇಲೆ ತಾಂಡವಪಿತನ ಶಾಪವಿ ।
ಶಾಲರಚನದಿ ಪುತ್ರಲಾಭಫ ।
ಲಾಳಿದೊರಕದೆ ಮಾಣದಿದು ತಾ ಸುಪ್ರಸಿದ್ಧವಲೆ ॥

(೮೯) ನಿಶ್ಚಲತೆಯಲಿ ಕೈಕೊಂಡನು–ದೃಢವಾಗಿ ಅಂಗೀಕರಿಸಿದನು, ಸುಮಂತ್ರನನು ಉಳಿಯೆ–ಸುಮಂತ್ರನನ್ನು ಬಿಟ್ಟು, ಮಿಕ್ಕ–ಉಳಿದ. ಆಪ್ತವಾದ ಆಲೋಚನೆ ಆಪ್ತಾಲೋಚನೆ. (ವಿ. ಪೂರ್ವ. ಕ)

(೯೦) ಸುಮಂತ್ರಮುಖದಲ್ಲಿ–(ಯಜ್ಞದಲ್ಲಿ ಉಪಯೋಗಿಸುವ) ಒಳ್ಳೆಯ ವೇದಮಂತ್ರಗಳ ಮೂಲಕವಾಗಿ; ಇಲ್ಲಿ ಸುಮಂತ್ರಮುಖದಲಿ, ಎಂದಿದ್ದರ ಇನ್ನೂ ಚೆನ್ನಾಗಿರುವುದು. (ಮಂತ್ರಪೂರ್ವಕವಾಗಿ ಮಾಡುವ ಈ ಯಜ್ಞದಿಂದ, ಎಂವರ್ಥವಾಗುತ್ತದೆ.) ಎನಗೆ ಸುಲಭವಹುದೇನು–ನನಗೆ ಸುಲಭವಾಗಿ ಸಂತಾನವಾಗುತ್ತದೆಯೋ? ಅನ್ವಯವೇ ಲಲಿತಲತೆ. (ಅನ. ಪೂರ್ವ. ಕ) ಕುಡಿಗೊಂಬುದೇ–ಅಭಿವೃದ್ಧಿಯಾಗುವುದೇ?

(೯೧) ಅಗ್ನಿವರ್ಣನ–ಅಗ್ನಿವರ್ಣನೆಂಬರಾಜನ.

(೯೨) ತಾಂಡವಪಿತನ ಶಾಪವಿಶಾಲ ರಚನದಿ–'ದಶರಥನಿಗೆ ಆತನಮಕ್ಕಳು ಸಮೀಪದಲ್ಲಿಲ್ಲದಿರುವಾಗ ಮರಣವು ಸಂಭವಿಸಲಿ, ಎಂದು ತಾಂಡವನೆಂಬ ಮುನಿಕುಮಾರನ ತಂದೆಯು ಕಾರಣಾಂತರ

ಕೇಳಿಬಲ್ಲೆ ನಿದಲ್ಲ ದಖಿಳ ಸು ।
ರಾಳಿಗಳ ದೂರಿನಲಿ ಲಕ್ಷ್ಮೀ ।
ಲೋಲ ನಿನ್ನುದರದಲಿ ಜನಿಸುವನೆಂದು ಪೂರ್ವದಲಿ ॥ ೯೨ ॥

ಅದರಿನಿಂ ರವಿವಂಶಲಕ್ಷ್ಮೀ ।
ಸುದತಿ ಗರ್ಭಿಣಿಯಾಗದಿರಳೆಂ ।
ಬುದು ಪುರಾತನ ಮುನಿಸುಭಾಷಿತಮದು ಯಥಾರ್ಥವಲೆ ॥
ವಿದಿತವೈದಿಕ ಲೌಕಿಕದ ಸಂ ।
ಪದದ ಸಂರಂಭಾತಿಶಯದ ।
ಭ್ಯುದಯದೊಳು ನಿನಗಾರು ಸರಿ ರವಿಕುಲದ ರಾಯರಲಿ ॥ ೯೩ ॥

ಅರಸ ಕೇಳ್ಯಾವ್ಯಾಧ್ವರಕೆ ಮುನಿ ।
ವರ ವಿಭಾಂಡ ಕುಮಾರಕನ ನೀ ।
ಕರಿಸಿಕೋ ತನ್ಮುನಿವರನ ನಾಚಾರ್ಯ ಭಾವದಲಿ ॥
ವರಿಸು ವರಪಿಂಡ ಪ್ರಸಾದೋ ।
ತ್ಕರದ ಲಹರಾತ್ಮಜರು ಬಳಿಕಾ ।
ಹರಿಹರ ಬ್ರಹ್ಮಾಮರೇಂದ್ರರು ಪಾಡೆ ನಿನಗೆಂದ ॥ ೯೪ ॥

ಎನೆ ಧರಾಧಿಪನತುಳಹರುಷದ ।
ಹೊನಲಿನಲಿ ಹೊದರೆದ್ದು ವಿಕಸಿತ ।
ವನರುಹಾನನನಾಗಿ ನುಡಿದನು ವರ ಸುಮಂತ್ರಂಗೆ ॥

ದಿವ ಶಾಪವನ್ನು ಕೊಟ್ಟಿರುವನು. ಇದರಿಂದಲೂ, ವಿಷ್ಣುವು ದಶರಥನಮಗನಾಗಿ ಹುಟ್ಟುವನೆಂಬಸಂಗತಿಯನ್ನು ಕೇಳಿರುವುದರಿಂದಲೂ, ದಶರಥನಿಗೆ ಸಂತಾನವಾಗುವುದು ಸತ್ಯವೆಂದು ಸುಮಂತ್ರನುಹೇಳಿದನು

(೯೩) ರವಿವಂಶಲಕ್ಷ್ಮಿಯೇ ಸುದತಿ (ಅವ. ಪೂರ್ವ. ಕ)

(೯೪) ವಿಭಾಂಡಕುಮಾರಕನ-ವಿಭಾಂಡಕಮುನಿಯ ಮಗನಾದ ಋಷ್ಯಶೃಂಗನನ್ನು; ವರಪಿಂಡಪ್ರಸಾದೋತ್ಕರದಲಿ-ಉತ್ತಮವಾದ ದೇವಾನ್ನವನ್ನು ಪ್ರಸಾದರೂಪವಾಗಿ ಯಜ್ಞೇಶ್ವರನಿಂದ ಪಡೆಯುವುದರಮೂಲಕವಾಗಿ;

(೯೫) ವಿಕಸಿತವನರುಹಾನನನಾಗಿ-ವಿಸ್ತಾರವಾದ ಮುಖಪದ್ಮವುಳ್ಳವನಾಗಿ (ನಗುವಿನಿಂದ ಕೂಡಿದ ಮುಖವುಳ್ಳವನಾಗಿ.)

ಆರ್ತವಾದ ಮಾನಸವುಳ್ಳವನು-(ಬ. ವ್ರೀ) ದುಃಖದಿಂದಕೂಡಿದ ಮನಸ್ಸುಳ್ಳವನಾಗಿ; ಮುನಿ + ಅದು + ಅರು + ಅಮುನಿಯು

ಮುನಿಯುದಾರಾಮುನಿಯ ಮಹಿಮೆಯ ।
ವಿನುತ ಚಾರಿತ್ರವನು ಬಲ್ಲಡೆ ।
ತನಗೆ ಹೇಳೆಂದಾರ್ತಮಾನಸನಾಗಿ ಬೆಸಗೊಂಡ ॥ ೯೫ ॥

ಧರಣಿಪತಿಕೇಳೀಚೆಯಲಿ ಸುರ ।
ಪುರದ ಸಿರಿಯನು ಬಯಸಿ ಬಹುಳಾ ।
ಧ್ವರವ ಕೈಕೊಂಡನು ಕಣಾ ರೋಮಾಂಘ್ರಿ ಭೂಪಾಲ ॥
ಹರೆದುದೀವೃತ್ತಾಂತವಮರೇ ।
ಶ್ವರನ ಸಭೆಯಲಿ ರೋಮಪಾದನ ।
ಸಿರಿಗೆ ಸೇವಕನಾದ ಸಿಂದ್ರನವಗ್ರಹಂಗಳಲಿ ॥ ೯೬ ॥

ವರುಷ ಹನ್ನೆರಡಬ್ದ ಪರಿಯಂ ।
ತರ ನಿಲಲು ಭಯದಿಂದ ನಿಂದಾ ।
ವರಮಹಾಕ್ರತುಶತಗಳಿಗೆ ಹನ್ನೆರಡು ಬಳಿಕುಳಿಯೆ ॥
ತರಣಿಯುರುಬೆಗೆ ಧರಣಿಕಲ್ಪದ ।
ಹರನ ಭಾಳಾಂಬಕದ ಶಿಖಿ ಸೀ ।
ವರಿಸಿದಂತಾಯ್ತೇನನೆಂಬೆನವಗ್ರಹಾಗಮವ ॥ ೯೭ ॥

ಹೊಳೆಗಳುರೆ ಬತ್ತಿದುವು ನಿರ್ಝರ ।
ಜಲವಡಂಗಿತು ಬರತುದಗ್ಗದ ।
ಕೊಳನು ಕೂರ್ಮನ ಬೆನ್ನಿಗಿಳಿದುವು ಜಲತಟಾಕಗಳು ॥
ಅಳಿದುಳಿದ ಜನಪದವು ಕಳವಳ ।
ಗೊಳುತ ಕಂಗೆಟ್ಟಂಗ ಭೂಪನ ।
ಬಳಿಗೆ ಬಂದೊದರಿದರು ದುರ್ಭಿಕ್ಷದ ಮಹಾಭಯವ ॥ ೯೮ ॥

(೯೬) ಇಂದ್ರನು ರೋಮಪಾದನ ಸಿರಿಗೆ ಸೇವಕನಾದನು-ರೋಮಪಾದನ ಐಶ್ವರ್ಯವು ಇಂದ್ರನೈಶ್ವರ್ಯವನ್ನು ಮೀರಿತು.

(೯೭) ವರುಷ-ವೃಷ್ಟಿ, ವೃಷ್ಟಿ-ವರ್ಷ. ಭಯದಿಂದ ನಿಂದ-ಭಯದಿಂದ ಕೈಕೊಂಡಿರುವ; ಧರಣಿ, ಕಲ್ಪದ ಹರನ ಭಾಳಾಂಬಕದ ಶಿಖಿ ಸೀವರಿಸಿದಂತಾಯ್ತು-ಭೂಮಿಯು ಪ್ರಳಯಕಾಲದ ರುದ್ರನ ಹಣೆಗಣ್ಣಿನ ಅಗ್ನಿಯಿಂದ ಸೀದುಹೋದಂತಾಯ್ತು.

(೯೮) ಜಲತಟಾಕಗಳು ಕೂರ್ಮನ ಬೆನ್ನಿಗಿಳಿದುವು-ನೀರುತುಂಬಿದ ಕೆರೆಗಳು ಬತ್ತಿ ಕೂರ್ಮನ ಬೆನ್ನಿನ ಸಮೀಪಕ್ಕೆ ಇಳಿದುವು. (ಆಳಕ್ಕೆ ಹೋಯಿತು.) ಅಳಿದು + ಉಳಿದ; ಜನಪದವು-ದೇಶದ ಜನಗಳು; ಇಲ್ಲಿ ವಾಚ್ಯಾರ್ಥವಾದ ದೇಶವು ಎಂಬುದಕ್ಕೆ ಪ್ರಯೋಜನವಿಲ್ಲವಾದುದರಿಂದ ಲಕ್ಷಣಾರ್ಥವನ್ನು ಹೇಳಿಕೊಳ್ಳಬೇಕು.

ಮನ್ನಿಸಿದ ನವರುಗಳನತಿಸಂ।
ಪನ್ನತೆಯ ಧನಧಾನ್ಯದಲಿ ಕರ।
ಖಿನ್ನನಾದನು ನೃಪ ಪ್ರಜಾಕ್ಷೋಭಪ್ರಯುಕ್ತಿಯಲಿ॥
ಸನ್ನಿಕಾರರ ದೇವಕೇಳ್ ಸಾ।
ಕಿನ್ನೆನಗೆ ಸಾಮ್ರಾಜ್ಯಸುಖ ಸಂ।
ಪನ್ನತೆಯ ಸೌಭಾಗ್ಯವೆಂದು ವಿರಾಗ ಪರನಾದ ॥ ೯೯ ॥

ಕರಿಸಿ ಮಂತ್ರಿಪುರೋಹಿತರ ಕೂ।
ಡೊರೆದನೇಕಾಂತದಲಿ ಸಾಕೇತ।
ಗರಸುತನ ಸಂಘಟಿಸಿದುದು ದುಷ್ಕೃತ ಪುರಾಕೃತದ॥
ಸುರರು ಮುನಿದರೊ ಧರ್ಮದೇವತೆ।
ಪರಿಭವಿಸಿದಳೊ ಭಾಗ್ಯವಧು ಮೊಗ।
ತಿರುಹಿದಳೊ ಮರೆಮಾತದೇಕೆಂದರಸ ಚಿಂತಿಸಿದ ॥ ೧೦೦ ॥

ಪರರ ಸತಿಯುನನಂಗ ರತಿಯಲಿ।
ಬೆರಸಿತಿಲ್ಲ ಸಮಸ್ತಸುಜನರ।
ಸಿರಿಗೆ ತಪ್ಪಿದುದಿಲ್ಲ ದೇವದ್ವಿಜರ ಪೂಜೆಯಲಿ॥
ಬರಡುಮನವನು ಮಾಡಿತಿಲ್ಲಾ।
ಧರೆಯನಳುಪಿದುದಿಲ್ಲ ಗುರುಹಿರಿ।
ಯರಲಿ ಹೊದ್ದಿದ ಪಾಪಫಲವಿನ್ನೆಂತುಟೋ ಯೆಂದ ॥ ೧೦೧ ॥

ವಿನುತಸತ್ಯಸುಭಾಷಿತಕೆ ಪ್ರ*ತಿ।
ಮೊನೆಯನೊಡ್ಡಿದುದಿಲ್ಲ ಪರಿಪಾ।
ಲನೆಯೊಳೂಣೆಯ ವಿದ್ದುದಿಲ್ಲ ಮದೀಯಜನಪದದ॥

(೯೯) ಪ್ರಜಾಕ್ಷೋಭಪ್ರಯುಕ್ತಿಯಲಿ-ಜನಗಳ ಕಷ್ಟಪ್ರಾಪ್ತಿಯಲ್ಲಿ; ನೃಪ-ಎಂಬುದಕ್ಕೆ ಸನ್ನಿಕಾರರದೇವ ಎಂಬುದು ವಿಶೇಷಣವು.

(೧೦೦) ಮರೆಮಾತು ಅದೇಕೆ?-ಮುಚ್ಚಿಕೊಂಡು ಮಾತನಾಡುವುದು ಏಕೆ? ನಾನು ಯಾವ ಅಧರ್ಮವನ್ನು ಆಚರಿಸಿದೆನೋ? ಅದರಿಂದಲೇ ಈ ರೀತಿಯಾದ ಜನಕ್ಷೋಭೆಯುಂಟಾಗಿದೆ; ನನ್ನ ತಪ್ಪನ್ನು ಮುಚ್ಚಿಕೊಳ್ಳುವುದರಿಂದ ಪ್ರಯೋಜನವೇನು?

(೧೦೧) ಬರಡುಮನವನು ಮಾಡಲಿಲ್ಲ-ಮನಸ್ಸನ್ನು ಹಿಂಡೆಗೆಯಲಿಲ್ಲ. ಗುರುಹಿರಿಯರಲಿಹೊದ್ದಿದ ಧರೆಯನು ಅಳುಪಿದುದಿಲ್ಲ-ಗುರುಹಿರಿಯರಿಗೆ ಕೊಟ್ಟಿದ್ದ ಮಾನ್ಯ ಮೊದಲಾದವುಗಳಿಗೆ ಆಸೆಪಡಲಿಲ್ಲ.

(೧೦೨) ಪ್ರತಿಮೊನೆಯನು-ಪ್ರತಿಭಟಿಸಿ ಯುದ್ಧವನ್ನು; ಊಣೆಯ-ದ್ವ; ಊನತಾ-ತ್ವ, ದುಷ್ಕೃತಫಲವ + ಇದು;

ಜನಪಥರ್ಮದ ಪದ್ಧತಿಯೊಳೊಂ।
ದಿನಿತು ತಪ್ಪಿದುದಿಲ್ಲವಕಟೆನ।
ಗಿನಿತು ಕೊಟ್ಟುದೆ ದೈವ ದುಷ್ಕೃತಫಲವಿದೇನೆಂದ ॥ ೧೦೨ ॥

ಎಂಬ ಸಮಯದಲಿಳಿದನಂಚೆಯ।
ಲಂಬರದಿನಂಬರಮಣಿ ಪ್ರತಿ।
ಬಿಂಬವೆನೆ ನಾರದನು ನೀತಿವಿಶಾರದನು ಬಳಿಕ ॥
ಅಂಬಕದ ಸಲಿಲದ ತುಷಾರ ಕ।
ದಂಬಕದ ಪತನದಲಿ ಮುನಿಯ ಪ।
ದಾಂಬುಜಕೆ ಚಾಚಿದನು ಮಣಿಶಿರವನು ಮಹೀಪಾಲ ॥ ೧೦೩ ॥

ದುಗುಡವೇಕೈ ಭೂಪ! ಬಿಡು ಬಾ।
ಧೆಗಳು ಬಳಿಸಲಿಸುವುವೆ ಪೂರ್ವದ।
ಯುಗದ ರಾಯರಿಗಗ್ಗಳನಲಾ ಗುಣಚರಿತ್ರದಲಿ ॥
ಸೊಗಸದವರನು ಬಲ್ಲೆ ನಿನಗೆಂ।
ದುಗುವ ಕರುಣಾರಸಗಳಲಿ ಮುನಿ।
ನೆಗಹಿ ನುಡಿದನು ರೋಮಪಾದಮಹಾಮಹೀಶಂಗೆ ॥ ೧೦೪

ಅರಸಕೇಳೈ ನಿನಗೆಸೇರುವ।
ಸಿರಿಗೆ ಮುನಿದನು ಶಕ್ರನಾತನ।
ಸಿರಿಗೆ ನಿಲವೆಂತುಂಟು ನಿನ್ನಯ ನಿಜಮನೋರಥದ ॥
ಪರಿಯ ಕೇಳೈ ಋಷ್ಯಶೃಂಗನ।
ಕರಿಸಿಕೋ ಪಟ್ಟಣಕೆ ಸರಿಯಾ।
ರ ರಸ! ನಿನಗಾಬಳಿಕ ಸುರನರನಾಗಲೋಕದಲಿ ॥ ೧೦೫ ॥

(೧೦೩) ಅಂಚೆ-ತ್ಭ, ಹಂಸ ತ್ಸ; ಅಂಬಕದ ಸಲಿಲದತುಷಾರಕದಂಬಕದ ಪತನದಲಿ-ಕಣ್ಣಿನಲ್ಲಿ ಆನಂದಭಾಷ್ಪಗಳನ್ನು ಸುರಿಸುತ್ತ.

(೧೦೪) ನಿನಗೆ ಸೊಗಸದವರನುಬಲ್ಲೆ-ನಿನ್ನ ಅಭಿವೃದ್ಧಿಗೆ ಹೊಟ್ಟೆಯುಕಿಚ್ಚು ಪಡುವರನ್ನು ನಾನು ತಿಳಿದಿದ್ದೇನೆ. ನಿನಗೆ-ಷಷ್ಠಿಗೆ ಚತುರ್ಥಿ ಬಂದಿದೆ.

(೧೦೫) ನಿನ್ನಯ ಮನೋರಥದ ಪರಿಯಕೇಳೈ-ನಿನ್ನ ಕೋರಿಕೆಯು ನೆರವೇರುವರೀತಿಯನ್ನು ಹೇಳುವೆನು ಕೇಳು.

ಹರನು ಪೂರ್ವದಲಾ ಮಹಾಮುನಿ ।
ವರನ ಜನನದೊಳಿತ್ತ ವರ ವುಂ ।
ಟರಸ! ಕೇಳ್ ದುರ್ಭಿಕ್ಷದಾತುರಬಾಧೆ ಭೇದಗಳು ॥
ಇರದವೋಲ್ ತನ್ಮುನಿಪನಿಹ ನಾ ।
ಹರಿಯೊಳೆಂದದರಿಂದ ನೀನಾ ।
ವರವಿಭಾಂಡಕ ಸುತನ ನಗರಿಗೆ ಕರಿಸಿಕೋ ಯೆಂದ ॥ ೧೦೬ ॥

ಕಳುಹು ಲಲನಾಜನವನಾ ಮುನಿ ।
ಕುಲಲಲಾಮನ ಬಳಿಗೆ ಸತಿಯರ ।
ಬಲೆಗೆ ಸಿಲುಕದರಾರು ತ್ರೈಮೂರುತಿಗಳೊಳಗಾಗಿ ॥
ನೆಲೆಯಿದೀಗೆನುತಾ ನೃಪಾಲನ ।
ತಿಳುಹಿದನು ನಿಜಸತ್ಕೃತಿಯ ಮಂ ।
ಗಳತೆಯನು ಕೈಕೊಂಡು ಹಾಯ್ದನು ಹಂಸೆಯಲಿ ಮುನಿಪ॥ ೧೦೭ ॥

ರಾಯಕೇಳ್ಬ ಬಳಿಕಲಾ ಮುನಿ ।
ರಾಯ ನಾಜ್ಞೆಯಲಂಗಭೂಮಿಯ ।
ರಾಯನಬಲಾಜನವ ಕರೆಸಿದನವರಿಗುತ್ತಮದ ॥
ನಾಯಕಿಯರನು ಪುಷ್ಪಚಾಪ ಶ ।
ರಾಯುಧನ ಮುಂಗುಡಿಯ ಸೇನಾ ।
ನಾಯಕಿಯರನು ನಗರದನುಪಮ ಹಾರನಾರಿಯರ ॥ ೧೦೮ ॥

ಇತ್ತನವರಿಗೆ ನೇಮವನು ಮುನಿ ।
ಪೋತ್ತಮನ ತರಹೇಳಿ ಮಣಿಮಯ ।
ದುತ್ತಮಾಭರಣಂಗಳನು ಪರಿಪರಿಯ ವಸನಗಳ ।

(೧೦೬) ಆ ಹರಿಯೊಳ್—ಆ ವಿಷ್ಣುವಿನಲ್ಲಿ; ಎಂದರೆ ವಿಷ್ಣುವಿನ ಧ್ಯಾನಮಾಡುತ್ತಾ ತಪೋನಿಷ್ಠನಾಗಿ.

(೧೦೭) ನೆಲೆಯಿದೀಗ—ನಿನ್ನ ಕಾರ್ಯವು ನೆರವೇರುವುದಕ್ಕೆ ಇದೇ ಗುಟ್ಟು. ನಿಜಸತ್ಕೃತಿಯ, ಮಂಗಳತೆಯನ್ನು—ತಾನುಮಾಡಿದ ಈ ಒಳ್ಳೆಯಕಾರ್ಯದ ಶುಭವನ್ನು.

(೧೦೮) ಪುಷ್ಪಚಾಪಶರಾಯುಧನ—ಹೂಗಳೇ ಬಿಲ್ಲೂ ಬಾಣಗಳೂ ಆಯುಧಗಳೂ ಯಾರಿಗೋ ಅವನು (ಮನ್ಮಥ) ನಾಯಕಿ — ನಾಯಕಶಬ್ದದ ಸ್ತ್ರೀಲಿಂಗರೂಪ.
ಕುಡಿಯ + ಮುಂದು—ಮುಂಗುಡಿ (ಅವ್ಯ. ಭಾ)—ಸೇನೆಯ ಮುಂಭಾಗದ.

(೧೦೯) ಆ + ರುಹ್; ಎಂಬ ಸಂಸ್ಕೃತಧಾತುವಿಗೆ ಏರುವುದು (ಹತ್ತುವುದು) ಎಂಬರ್ಥವಿ

ಇತ್ತು ಪುಷ್ಪರಥಂಗಳಲಿ ಮಣಿ ।
ಮುತ್ತಿನಂದಣಗಳಲಿ ಹಯದಲಿ ।
ಮತ್ತಗಜರೋಹಣದಿ ಬೀಳ್ಕೊಟ್ಟನು ಮಹೀಪಾಲ ॥ ೧೦೯ ॥

ಸಿತಗುಡಾಜ್ಯ ಸುಲವಣ ಕಟುಮಿ ।
ಶ್ರಿತರಸಾದಿ ಸಮಸ್ತ ರಸ ಪೂ ।
ರಿತ ಸುಧಾ ಮಧುಭಕ್ಷ್ಯ ಫಲ ಭೋಜ್ಯಾದಿ ವಸ್ತುಗಳ ॥
ಕೃತಕ ಕುಶಲೋಪಾಯದಲಿ ಪರಿ ।
ಚಿತದ ಪಣ್ಯ ವಿಳಾಸಿನೀಜನ ।
ತತಿಯೊಡನೆ ಕಳುಹಿದನು ನೃಪ ಕೇಳಾ ಮಹೀಪಾಲ ॥ ೧೧೦ ॥

ಮೇದಿನೀಪತಿ ಕೇಳಿದೈ ಕಮ ।
ಲೋದರನು ಕಾಮಿನಿಯ ನೆದೆಯೊಳ ।
ಗಾದರಿಸಿದನು ಕಮಲಭವ ಜಗವರಿಯೆ ನಂದನೆಯ ॥
ಐದೆಯನು ಮಾಡಿದನು ಅರೆವೆ ।
ಣ್ಣಾದನೀಶ್ವರನಿಂದ್ರ ಚಂದ್ರರ ।
ಹಾದಿಯಿದುವೆನೆ ಮಿಕ್ಕಿನವರನು ಹೇಳಲೇನೆಂದ ॥ ೧೧೧ ॥

ನಡೆದುದೀ ಕಾಂತಾಜನಗಳು ।
ಗ್ಗಡವು ಪಯಣದ ಪಯಣಗತಿಯಲಿ ।
ಸಡಗರದ ಸಂರಂಭದಲಿ ಸಮ್ಮೋಹನಂಗಳಲಿ ॥
ಎಡೆಯ ಮುರುವಿನ ವೀಧಿಗಳ ಸಂ ।
ಗಡವ ಕಳೆ ಕಳೆದೈದಿದರು ಮುನಿ ।
ಮೃಡ ವಿಭಾಂಡ ಕುಮಾರಕನ ಕಮನೀಯ ಕಾನನವ ॥ ೧೧೨ ॥

ರುವುದು, ಆದುದರಿಂದ ಆರೋಹಣ, ಎಂದಾಗಬೇಕಾದ ರೂಪವನ್ನು ಆ, ಎಂಬುಪಸರ್ಗವನ್ನು ಬಿಟ್ಟು 'ರೋಹಣ' ಎಂದು ಪ್ರಯೋಗಿಸಿದ್ದಾನೆ.

(೧೧೦) ಕೃತಕ ಕುಶಲೋಪಾಯದಲಿ ಪರಿಚಿತದ-ಮೋಸದಿಂದ ಚಮತ್ಕಾರಮಾಡುವ ಉಪಾಯದಲ್ಲಿ ಪರಿಚಯವುಳ್ಳ

(೧೧೧) ಕಮಲ-ತಾವರೆಯು, ಉದರನು-ಹೊಟ್ಟೆಯಲ್ಲಿ ಯಾರಿಗೋ ಅವನು(ಬ. ವ್ರೀ.)-(ಬ್ರಹ್ಮ); ಅರೆ-ಹೆಣ್ಣು ಯಾರಿಗೋ ಅವನು-ಅರವೆಣ್ಣ, (ಬ. ವ್ರೀ.) ದೇಹದ ಅರ್ಧಭಾಗವು ಹೆಂಗಸಾಗಿರತಕ್ಕವನು-ಅರ್ಧನಾರೀಶ್ವರ.

(೧೧೨) ಎಡೆಯ ಮುರುವಿನ ವೀಧಿಗಳ ಸಂಗಡವ-ಸಮೀಪದಲ್ಲಿ ತಿರುಗಿಕೊಳ್ಳುವ ಬೀದಿಗಳ ಗುಂಪನ್ನು; ಉಗ್ಗಡ, ತ್ಭ ಉತ್ಕಟ-ತ್ಸ,

ಲಂಬಿಸಿದ ಫಲಭರವೆ ರಸದಾ ।
ಳಿಂಬ ಖರ್ಜೂರಾಮ್ರ ಕದಳಿ ಕ ।
ದಂಬ ಕುರುವಕ ತಿಲಕ ತೆಂಗು ತಮಾಲ ಪುನ್ನಾಗ ॥
ಜಂಬು ಪನಸ ಮಧೂಕ ತರುನಿಕು ।
ರುಂಬದಲಿ ಸುರನಂದನ ಪ್ರತಿ ।
ಬಿಂಬವನೆ ಬಗೆಗೊಳಿಸಿ ತನುಪಮ ಮುನಿತಪೋವಿಪಿನ ॥ ೧೧೩ ॥

ನಳಿನವಿಲ್ಲದ ಕೊಳನು ನವ ಶಾ ।
ಡ್ವಲಗಳಿಲ್ಲದನೆಲನು ಹೊಸಕೆಂ ।
ದಳಿರು ತೀರದಮರನು ಮಖಮುಖಿಸದ ಸವಿಸಾರಣನು ॥
ಫಲಿತವಿಲ್ಲದ ಪುಷ್ಪಚಯ ಮು ।
ಕ್ಕಳುಗಳಿಲ್ಲದ ಖಗಮೃಗಾವಳಿ ।
ಮುಳಿಗಳಿಲ್ಲದ ಮೇಘ ವಿಲ್ಲಾ ವನದ ವಳಯದಲಿ॥ ॥ ೧೧೪ ॥

ಗಿಳಿಯಗಿಡಗನಕೂಟ ಮರಿಗೋ ।
ಗಿಲೆಯ ಸಾಳ್ವನಸಖ್ಯ ಹರಿಕರಿ ।
ಕಳಭ ದುರುಬಂಧುತ್ವ ಫಣಿಮುಂಗುಲಿಯನಂಟುತನ ॥
ಹುಲಿಯಹುಲ್ಲೆಯನೇಹ ಬಿರುಗ ।
ತ್ತಲೆಯ ಬೆಳಗಿನ ಮೈತ್ರಿ ಮಧುರದ ।
ಹುಳಿಯ ಸರಿ ಸಮ್ಬಂಧ ವಿದ್ದುವು ಬನದೊಳಾ ಮುನಿಯ ॥೧೧೫॥

ಆಟವೇ ಮೃಗಗಣದೊಡನೆ ಸವಿ ।
ದೂಟವೇ ವನಕಂದಫಲ ಕಂ ।
ಜೇಟವೇ ಕಂ ಜಾಕ್ಷ ಕಾಮಾರಿಗಳ ಭಜನೆಯಲಿ ॥
ಕೂಟವೇ ಯೋಗಾಂಗನೆ ಯ ಸರಿ ।
ಪಾಟಿಯಲ್ಲಿಹ ಋಷ್ಯಶೃಂಗನ ।
ನಾಟವಿಕ ಕಾಮಿನಿಯರೈದಿದರರಸ ಕೇಳೆಂದ ॥ ೧೧೬ ॥

(೧೧೩) ನಂದನ-ಇಂದ್ರನ ಉದ್ಯಾನವನಕ್ಕೆ ಹೆಸರು, ಕದಂಬ-ತ್ಸ, ಕದಹ-ದ್ಭ

(೧೧೪) ಫಲಿತವಿಲ್ಲದ ಪುಷ್ಪಚಯ-ಹಣ್ಣುಗಳನ್ನು ಬಿಡದೆ ವ್ಯರ್ಥವಾಗಿ ಬಿಟ್ಟಿರುವ ಹೂಗಳು.

(೧೧೫) ನೇಹ-ದ್ಭ, ಸ್ನೇಹ-ತ್ಸ; ಫಣಾ-ಹೆಡೆ, ಅದುಳ್ಳುದು ಫಣಿ-(ಸರ್ಪ). ಬಿಟ್ಟತು + ಕತ್ತಲೆ-ಬಿರುಗತ್ತಲೆ (ವಿ. ಪೂರ್ವ. ೩)

(೧೧೬) ಕಂಜೇಟ-ನೇತ್ರಾನಂದ; ಇಹ ಎಂಬುದನ್ನು ಮೇಲೆಹೇಳಿರುವ ನಾಲ್ಕು ಸಂದರ್ಭಗಳಲ್ಲಿಯೂ ಅನ್ವಯಿಸಬೇಕು.

ಗತಿಗೆ ಕುಣಿದುವು ಹಂಸ ಸಂಭಾ ।
ಷಿತದಮೃದುರ ವಕೊದಗಿದುವು ಪರ ।
ಭೃತವ ಪಾಂಗಮರೀಚಿ ಚಂದ್ರಿಕೆಗಾ ಚಕೋರ ಚಯ ॥
ಗತ ಪರಿಶ್ರಮವಾದು ವಧರಾ ।
ಮೃತ ಫಲಕೆ ಮನದಂದುವರಗಿಳಿ ।
ರತಿಗೆ ಸೇವಕರಿಲ್ಲ ದಾದುದು ಹೇಳಲೇನೆಂದ ॥ ೧೧೭ ॥

ಅರಸಕೇಳಾತರುಣಿಯರ ತನು ।
ಪರಿಮಳದ ಸೋಂಕಿನಲಿ ಸುತ್ತಲು ।
ಪರಿಮಳಿಸಿದುವು ಚಲಿಪತರಳಾ ಪಾಂಗರೋಚಿಯಲಿ॥
ಮುರಿದುದಾ ಮರಗತ್ತಲೆಯ ಪೈ ।
ಸಿರಿ ಸುಗೀತಾಮೃತದ ಸವಿಗ ।
ಚ್ಚರಿಯ ರೋಲೈಸಿದರು ವರಕಾಂತಾ ಕದಂಬಕವ ॥ ೧೧೮ ॥

ಮುನಿಪನಿದ್ದನು ಮುಗ್ಧತಾಪಸ ।
ಮುನಿಗಣದ ಮಧ್ಯದಲಿ ಸಂಮೇ ।
ಳನವಿಪುಣ್ಯಮೃಗಾವಳಿಯ ಸೋಂಕಿನಲುಪಾಸನೆಯ ॥
ವನರುಹಾಕ್ಷಧ್ಯಾನದಲಿ ಕೇ ।
ಳಿನಕುಲೇಶ್ವರ ಸತಿಯರೀತನ ।
ನನುವರಿತು ಹೊದ್ದಿದರು ಹರಿಮೇಖಲೆಯ ಚಾಳಿಯಲಿ ॥ ೧೧೯ ॥

ರಾಯಕೇಳೈ ತಾಪಸಾಂಗದ ।
ನಾಯಕಿಯ ರದರೊಳಗೆ ವರಕುಸು ।
ಮಾ ಯುಧನಖಂಡೆಯಕೆ ಮಣಿಯದ ಮುನಿಯ ಚರಣದಲಿ ॥
ಮಾಯದಭಿರಂಜನೆಯ ರಚಿತೋ ।
ಪಾಯದಲಿ ಗೋತ್ರಪ್ರವರ ಪರಿ ।
ಯಾಯದಲಿ ಪದಕೆರಗಿದರು ಪಾವನತಪೋಧನನ ॥ ೧೨೦ ॥

(೧೧೭) ಹಂಸ-ಎಂಬುದು ಜಾತ್ಯೇಕವಚನವಾದುದರಿಂದ ಕುಣಿದುವು ಎಂಬ ಬಹುವಚನ ಕ್ರಿಯೆ ಬಂದಿರುವುದು. ಇದೇರೀತಿಯಲ್ಲಿ ಉಳಿದ ವಾಕ್ಯಗಳಲ್ಲಿಯೂ ತಿಳಿಯಬೇಕು. ಪರ-ಅನ್ಯರಿಂದ (ಕಾಗೆಯಿಂದ) ಭೃತ-ರಕ್ಷಿಸಲ್ಪಡುವುದು, ಪರಭೃತ-ಕೋಕಿಲೆ.

(೧೧೮) ಅಪ್ಸರ-ತ್ಸ, ಅಚ್ಛರ-ತ್ಛ, ಸ್ತ್ರೀಲಿಂಗರೂಪ ಅಚ್ಛರಿ.

(೧೧೯) ಅನ್ವಯ:- ಮುನಿಪನು ಮುಗ್ಧ.........ಮಧ್ಯದಲ್ಲಿ, ಪುಣ್ಯಮೃಗಾವಳಿಯ ಸಮ್ಮೇಳನದಿ, ಉಪಾಸನೆಯಸೋಂಕಿನಲಿ, ವನರುಹಾಕ್ಷಧ್ಯಾನದಲಿ ಇದ್ದನು. ಉಪಾಸನೆಯಸೋಂಕಿನಲಿ-ತಪೋನಿಷ್ಠೆಯಿಂದ; ಹರಿಮೇಖಲೆ-ಇಂದ್ರ ನೀಲಮಣಿಯ ಒಡ್ಯಾಣ; ಚಾಳಿಯಲಿ-ಸೇರುವೆಯಿಂದ.

(೧೨೦) ತಾಪಸಾಂಗದ-ಮುನಿವೇಷವುಳ್ಳ.

ವಂದಿಸಿದ ಮುನಿವೇಷದಬಲಾ ।
ವೃಂದಕತಿ ಭಕ್ತಿಯಲಿ ಮುಗುಳಭಿ ।
ವಂದನಂಗೈದು ಚಿತಸತ್ಕಾರೋಪಚಾರದಲಿ ॥
ಕಂದಮೂಲ ಫಲಾದಿವಸ್ತುಗ ।
ಳಿಂದ ಮನ್ನಿಸಿ ನಮ್ಮೆಡೆಗೆ ನೀ ।
ವ್ಬಂದ ಕಾರಣವೇನೆನುತ ಬೆಸಗೊಂಡನವರುಗಳ ॥ ೧೨೧ ॥

ನಾವಲೇ ನಿಮ್ಮಡಿಯ ಬಹುಳ ಕೃ ।
ಪಾವಲೋಕನದಿಂದ ಕಾಮ್ಯಮ ।
ಹಾವಿಳಾಸಾಧ್ವರವ ಕೈಕೊಂಡೆವು ವಿನೋದದಲಿ ॥
ನೀವು ಬಿಜಯಂಗೈದ ಡೀಕ್ರತು ।
ಪಾವನವಲೇಯೆನುತ ಕಪಟಕ ।
ಲಾವಿದೆಯರೊಡಬಡಿಸಿದರು ಗಮನವನು ಮುನಿವರನ ॥ ೧೨೨ ॥

ಜನಪ ಕೇಳ್ಮುನಿವೇಷದ ಬಲಾ ।
ಜನ ತದೀಯ ಮುನೀಶ್ವರನ ಸೊಬ ।
ಗಿನ ಸುಸೋಂಕಿನಲೊಲುಮೆಯಲಿ ವಿವಿಧೋಪಚಾರದಲಿ ॥
ವಿನುತ ಗಂಧಸುಮಾಲ್ಯಮಣಿಮಂ ।
ಡನ ನವಾಂಬರಗಳಲಿ ಚಿತ್ತವ ।
ನನುಗೊಳಿಸಿ ಕೈವಶಕೆ ತಂದರು ದಿವಸದಿವಸದಲಿ ॥ ೧೨೩ ॥

ಸಾರಿದರು ಬಳಿಕುತ್ತಮುದ ಶೃಂ ।
ಗಾರನಾರೀ ಜನಮನೋಜನ ।
ಕೂರಲಗಿ ಗೊಡಲೊಡ್ಡಿಸಿದ ರಾಮುಗುಧ ಮುನಿವರನ ॥
ಆರುಗೆಲಬಹುದರಸ ಕೇಳ್ಕಾ ।
ಮಾರಿಗಸದಳವ ಬಲೆಯರ ಕಂ ।
ಹೋರೆಗಳ ಕಾಲಾಟ ಕಳುಕದರುಂಟೆ ಹೇಳೆಂದ ॥ ೧೨೪ ॥

(೧೨೧) ಮುಗುಳೆ + ಅಭಿವಂದಿಸಿ.

(೧೨೨) ನಾವು ನಿಮ್ಮಡಿಯ.........ದಿಂದ ಕಾಮ್ಯ.........ರವ, ವಿನೋದದಲಿ ಕೈಕೊಂಡೆವು ಅಲೇ. ನಿಮ್ಮ ದಯೆಯಿಂದ ನಾವು ಕಾಮ್ಯಮಹಾಯಜ್ಞವನ್ನು ಸುಲಭವಾಗಿ ಮಾಡಲುದ್ಯುಕ್ತರಾಗಿದ್ದೇವೆ.

(೧೨೩) ದಿವಸದಿವಸ–ಕ್ರಮಾನುಲ್ಲಂಘನೆಯಲ್ಲಿ ದ್ವಿರುಕ್ತಿ ಬಂದಿದೆ.

(೧೨೪) ಕೂರಿತು + ಅಲಗು–ಕೂರಲಗು (ವಿ. ಪೂರ್ವ. ಕ)–ಹರಿತವಾದ ಬಾಣ.

ಬಳಿಕಲಾ ಮುನಿವರನ ನಾನಾ ।
ಫಲಸುಭೋಜನ ಭಕ್ಷ್ಯದಲಿ ಸವಿ ।
ಗೊಳಿಸಿದರು ಸೆಳೆದರು ಮುನೀಂದ್ರನ ಮನವ ಮಾಯೆಯಲಿ ॥
ಕಳವಳಿಸಿದುವು ಕರಣವಿಂದ್ರಿಯ ।
ಗಳು ನಿತಂಬಿನಿಯರಲಿ ಸಿಕ್ಕಿದ ।
ನಲರುಗಣೆಯುಂಣನ ಘಡಾವಣೆಗಾವಿಭಾಂಡಸುತ ॥ ೧೨೫ ॥

ಅಮೃತರಸಮಯ ವಿವಿಧಕಾವ್ಯ ।
ಪ್ರಮುಖನಾಟಕಗಾನ ಭರತಾ ।
ಗಮ ರಸಾಲಂಕಾರ ರೂಪಕರಚಿತ ವಿದ್ಯೆಯಲಿ ॥
ಅಮಿತ ಸೌಖ್ಯ ಕಥಾವಿನೋದದ ।
ಸಮತೆಯಲಿ ಭಾರತಿಕಳಾವಿ ।
ಭ್ರಮಕೆ ಗುರುವೆನಲೊಲಿಸಿ ಮೆಚ್ಚಿಸಿದರು ಮುನೀಶ್ವರನ ॥ ೧೨೬ ॥

ಬಳಿಕ ಸಕಲೇಂದ್ರಿಯಗಳುಬ್ಬಟೆ ।
ಬಲಿದುವಿವರುಪಚಾರದಲಿ ಹಿಂ ।
ದುಳಿದುದುಗ್ರತಪಃ ಪ್ರಭಾವದ ಬೆಳಗು ನಿಮಿಷದಲಿ ॥
ಅಲಗನುಗಿದನು ಮದನ ಮುಂದಾ ।
ನಿಲನು ಹುರಿಗಟ್ಟಿದನು ಕೈಚ ।
ಪ್ಪಳೆಯಲೊದರಿದನಾ ವಸಂತನು ಮುನಿಪನಿದಿರಿನಲಿ ॥ ೧೨೭ ॥

ಬಿದ್ದನಬಲಾಜನದ ಬಲೆಯೊಳ ।
ಗೊದ್ದುಕೊಳುತ ಮುನೀಂದ್ರನಂಗಜ ।
ಸುದ್ದುರುಟುತನಕಾರು ಸರಿಸುರನರಭುಜಂಗರಲಿ ॥
ತಿದ್ದಿತಾತನ ತಪ ಸುಮಾಯೆಯ ।
ಮದ್ದಿನಲಿ ಮರುಳಾಗಿ ಮದನನ ।
ಹೊದ್ದಿದನು ಹೊಡಕರಿಸಲರಿಯದೆ ಭೂಪಕೇಳೆಂದ ॥ ೧೨೮ ॥

(೧೨೫) ಅಲರು-ಹೂಗಳು, ಕಣೆಯು-ಬಾಣಗಳು ಯಾರಿಗೋ ಅವನು (ಬ. ವ್ರೀ.)-ಅಲರುಗಣೆಯು (ಮನ್ಮಥ)

(೧೨೬) ಭರತಾಗಮ-ಭರತಾಚಾರ್ಯನೆಂಬುವನು ಬರೆದಿರುವ ನಾಟ್ಯಶಾಸ್ತ್ರ.

(೧೨೭) ಉಗ್ರತಪಃಪ್ರಭಾವದ ಬೆಳಗುನಿಮಿಷದಲಿ ಹಿಂದುಳಿದುದು-ಕ್ರೂರವಾದ ತಪೋಮಹಿಮೆಯು ಬೆಳಕು ಸ್ವಲ್ಪಕಾಲದಲ್ಲಿಯೇ ಕಡಿಮೆಯಾಯಿತು.

(೧೨೮) ತಾತನತಪಸು ಮಾಯೆಯುಮದ್ದಿನಲಿ ತಿದ್ದಿತು-ಮೋಹವೆಂಬ ಔಷಧದಿಂದ ತಪಸ್ವಿನಸ್ಥಿತಿಯು ಬದಲಾಯಿಸಿತು, ಎಂದರೆ ತಪಸ್ಸು ನಿಂತುಹೋಗಿ ಕಾಮವಿಕಾರಕ್ಕೊಳಗಾದನೆಂಬ ಭಾವವು.

ಮೆಚ್ಚಿ ಮರುಳಾದಾ ಮುನೀಂದ್ರನ ।
ನುಚ್ಚಿತಂದರು ತರುಣಿಯರು ಬಳಿ ।
ಕಚ್ಚಿರಿಯ ಕೇಳರಸ ಮೇಘಗಳ ಭ್ರಮಂಡಲವ ॥
ಮುಚ್ಚಿಕೊಂಡುವು ಮುರಿದು ನೇಸರು ।
ಗಿಚ್ಚಿನ ಖಿಳಾಂಬುಧಿಯ ಜಲವನು ।
ಕಚ್ಚಿತಂದುಗುಳಿದುವು ರೋಮಾಂಘ್ರಿಯ ಸುಭೂಮಿಯಲಿ ॥೧೨೯॥

ಅರಳಿ ತರಸನ ವದನಲಕ್ಷ್ಮಿಯ ।
ಸಿರಿ ವಿಶಾಲದಲಿರ್ದನುಮಹೀ ।
ಶ್ವರನುಮುನಿಪನ ಬರವಿನಲಿ ಬಳಿಕಾನರಾಧಿಪನ ॥
ಧರೆಯಜನ ಸಂತೋಷಮಯ ಸಾ ।
ಗರದೊಳದ್ದುದು ಹೇಳಲೇನದ ।
ನರಸ ಕರಸಾ ಮುನಿಯಸಿದ್ಧಿಗ ಸಾಧ್ಯ ವೇನೆಂದ ॥ ೧೩೦ ॥

ಪರಮಹರುಷದಲಾ ಮುನೀಂದ್ರನ ।
ನುರುತರೋತ್ಸವದಿಂದ ಲಾಪುರ ।
ದರಸ ನಿದಿಗೊಂಡೊಯ್ದು ಕೊಟ್ಟನು ತನ್ನನಂದನೆಯ ॥
ಹರನು ಮಾದೇವಿಯರ ಪೋಲ್ಮೆನಿ ।
ವರನು ಶಾಂತಾದೇವಿ ಸಹಿತಾ ।
ಧರಣಿಪನ ಭವನದಲಿ ಬೆಳಗಿದನಧಿಕತೇಜದಲಿ ॥ ॥ ೧೩೧ ॥

ಬರಡು ಹಯನಹುದುಡಿದ ನೀರಸ ।
ತರು ಚಿಗುರ್ವುವು ಬಂಜೆ ಗರ್ಭವ ।
ಧರಿಸುವಳು ಧನಧಾನ್ಯ ಗೋಧನ ಸಂಪದಾದಿಗಳು ॥
ಭರಿತ ವಾಗಿಹುವಾಮುನಿಪ ನಿಹ ।
ಧರಣಿಯಲಿ ನೀನಾಮುನೀಂದ್ರನ ।
ಬರಿಸಿ *ಕ್ರತುವನು ನಡಿಸಿದರೆ ಸುತರಹರು ನಿನಗೆಂದ ॥ ೧೩೨ ॥

(೧೨೯) ನೇಸರುಗಿಚ್ಚಿಂ + ಅಖಿಳಾಂಬುಧಿಯ, ಮೇಘಗಳು ಅಭ್ರಮಂಡಲವ ಮುಚ್ಚಿ ಕೊಂಡುವು. (ಮೇಘಗಳು) ನೇಸರುಗಿಚ್ಚಿಂ ಅಖಿಳಾಂಬುಧಿಯ ಜಲವನು ಕಚ್ಚಿ ತಂದು ರೋಮಾಂಘ್ರಿಯ ಸುಭೂಮಿಯಲ್ಲಿ ಉಗುಳಿದುವು, ಎಂದನ್ವಯವು.

(೧೩೦) ಅನ್ವಯ-ಮುನಿಪನ ಬರವಿನಲಿ ಅರಸನ ವದನ ಅರಳಿತು; ಮಹೀಶ್ವರನು, ಲಕ್ಷ್ಮಿಯ ಸಿರಿವಿಶಾಲದಲಿರ್ದನು-ದೊರೆಯು ವಿಸ್ತಾರವಾದ ಸಂಪತ್ತನ್ನು ಹೊಂದುತ್ತಿದ್ದನು.

(೧೩೧) ಹರನೂ + ಉಮಾದೇವಿಯೂ-ಹರನುಮಾದೇವಿಯರು (ದ್ವಂದ್ವ) ತನ್ನ ನಂದನೆಯ-ತನ್ನ ಮಗಳಾದ ಶಾಂತಾದೇವಿಯನ್ನು.

(೧೩೨) ಪಯ-ಎಂದರೆ ಹಸು, ಇಲ್ಲಿ ಪಕಾರಕ್ಕೆ ಹಕಾರಾದೇಶವುಬಂದು 'ಹಯ'ಎಂದಾಗಿದೆ.

## ಆರನೆಯಸಂಧಿ.

ಸೂಚನೆ । ಭೂಮಿಪತಿ ದಶರಥನು ಸುತಕಾ ।
ಮ್ಯಾಮಹಾಧ್ವರ ಕೆಂದು ತಂದನು ।
ರೋಮಪಾದನೃಪಾಲನ ಳಿಯನನ ಖಿಲವಿಭವದಲಿ ॥

ಧರಣಿಜಾಕಿ ಸುತೆ ಕೇಳ್ಸುಮಂತ್ರನ ।
ವರ ವಚೋಭಿಪ್ರಾಯವನು ನಿಜ ।
ಗುರು ವಸಿಷ್ಠಂಗ ರುಹಿ ತನ್ಮುನಿವರ ನನುಜ್ಞೆಯಲಿ ॥
ಪರಮಋಷಿ ವೈಭಾಂಡಕನ ನ ।
ಧ್ವರಕೆ ತಹ ನೇಮವನು ಪಡೆದತಿ ।
ಹರುಷದಲಿ ಹರಿದಶ್ವಕುಲನುದ್ಯೋಗವನನಾದ ॥ ೧೩೩ ॥

ನೆಗಳ್ವ* ಕಾರ್ಯಸ್ಥಿತಿಗೆ ಲಿಖಿತಾ ।
ಳಿಗಳ ನು ಡುಗೊರೆಸಹಿತ ಲರಸಾ ।
ಳುಗಳ ಕೈಯಲಿ ಕಳುಹಿದರು ನೃಪರೋಮಪಾದಂಗೆ
ತೆಗಿಸಿದನು ಬಳಿಕುತ್ತಮದ ತೊಡ ।
ವುಗಳ ದಿವ್ಯದುಕೂಲ ರತ್ನಾ ।
ಳಿಗಳ ನನುಪಮಗಜಹಯಾದಿಸಮಸ್ತ ವಸ್ತುಗಳ ॥ ॥ ೧೩೪ ॥

ಭಾರಿಸಿದ ಬಲುಹೊರೆಯ ಬಂಡಿಗ ।
ಳೋರಣಿಸಿದುವು ಪಯಣದಲಿ ಕ ।
ರ್ಪೂರ ಕಸ್ತುರಿ ಕುಂಕುಮದ ಪೆಟ್ಟಿಗೆಯ ಸಾಲಿನಲಿ ॥
ಊರ ಹೊರವಳಯದಲಿ ಗುಡಿ ಗೂ ।
ಡಾರ ಹೊಯ್ದುವು ಶುಭಮುಹೂರ್ತದ ।
ವಾರನಕ್ಷತ್ರದಲಿ ದಶರಥರಾಯ ಹೊರವಂಟ ॥ ೧೩೫ ॥

(೧೩೩) ಪರಮ + ಋಷಿ = ಪರಮರ್ಷಿ, ಎಂದು ಗುಣಸಂಧಿಯಾಗಬೇಕಾಗಿತ್ತು. ವಿಕಲ್ಪದಿ ಸಂಧಿಕಾರ್ಯವು ಬಾರದೆ ಪ್ರಕೃತಿಭಾವವು ಬಂದಿದೆ. ವೈಭಾಂಡಕ-ವಿಭಾಂಡಕಋಷಿಯ ಮಗ, ಹರಿತ್-ಹಸುರುಬಣ್ಣವುಳ್ಳ, ಅಶ್ವ-ಕುದುರೆಗಳುಳ್ಳವನು-ಹರಿದಶ್ವ (ಸೂರ್ಯ)

(೧೩೪) ಉಡುವ + ಕೊರೆ = ಉಡುಗೊರೆ (ಗಮಕ)

(೧೩೫) ಓರಣ, ಎಂಬ ಕನ್ನಡ ನಾಮವಾಚಕದಮೇಲೆ 'ಇಸು' ಪ್ರತ್ಯಯವು ಸೇರಿ 'ಓರಣಿಸು' ವೆಂಬ ಧಾತುವಾಗಿದೆ. ಗೂಡಾರ-ದ್ಭ, ಗೂಢಾಗಾರ-ತ್ಸ.

ಸುಳಿದು ವಾರತಿ ಮುಂದೆ ವಿಪ್ರರ ।
ಕಳಕಳದ ಮಂತ್ರಾಕ್ಷತೆಯ ಕೈ ।
ಕೊಳುತ ಮಂಗಳಪಾಠಕರ ಬಹುವಾದ್ಯಘೋಷದಲಿ ॥
ಘಳಿಗೆವಟ್ಟಲ ಜೀವಕೇಂದ್ರ ।
ಸ್ಥಳದ ಶುಭಲಗ್ನದಲಿ ಭೂಪತಿ ।
ಹೊಳಲ ಹೊರವಂಟನು ಸುಮಂತ್ರಾದಿಗಳ ಗಡಣದಲಿ ॥ ೧೩೬ ॥

ಮಣಿಮಯದ ಮುಕ್ತಾಫಲದ ಕೇ ।
ವಣದ ಕನಕದ ದಡ್ಡಿ ಬಿಗಿದಂ ।
ದಣವ ನೇರಿದ ರರಸಿಯರು ಮೂವರು ಮಹೀಪತಿಯ ॥
ಕುಣಿವ ಕುದುರೆಯ ಹಣ್ಣಿ ದುರುವಾ ।
ರಣ ಘಟಾಳಿಯ ತೇರುಗಳ ತಿಂ ।
ಥಿಣಿಯ ತೆರಳಿಕೆಯಿಂದ ತೆರಳಿದ ನಾಮಹೀಪಾಲ ॥ ೧೩೭ ॥

ತಳಿತ ಪಾಲ್ಮರನೇರಿ ಪಿಂಗಲಿ ।
ಬಲಿದು ಬಾಯ್ಗೊಂಡುವು ಸರಾಗದಿ ।
ನೊಲಿದು ದಂಪತಿ ಕಾರನಿತ್ತುವು ಕರಿಯಹಕ್ಕಿಗಳು ॥
ಸುಳಿದ ವೆಡದಿ ವಿಹಂಗ ಬಲದಲಿ ।
ನಲಿಯೆ ಸೂಚಿತ ಪುತ್ರಲಾಭದ ।
ಫಲವಿಶೇಷಿತ ಶಕುನ ಹಿಗ್ಗಿಸಿ ತವನಿಪಾಲಕನ ॥ ೧೩೮ ॥

(೧೩೬) ಗಡಣ-ಧ್ವ, ಘಟನ-ತ್ಸ. ಘಳಿಗೆವಟ್ಟಲ-ಒಂದು ಬಟ್ಟಲಿನ ತಳಕ್ಕೆ ಕೆಲವು ರಂಧ್ರಗಳನ್ನು ಮಾಡಿ ಅದನ್ನು ನೀರುತುಂಬಿದ ಪಾತ್ರೆಯೊಂದರಲ್ಲಿ ತೇಲಬಿಡುವುದು, ಆ ರಂಧ್ರಗಳಮೂಲಕ ಸ್ವಲ್ಪಸ್ವಲ್ಪವಾಗಿ ನೀರುತುಂಬುತ್ತ ಬಂದು ಆ ಬಟ್ಟಲು ನೀರಿನಲ್ಲಿ ಮುಳುಗಿಕೊಂಡ ಕೂಡಲೆ ಒಂದುಗಳಿಗೆ ಆಯ್ತೆಂದು ತಿಳಿದುಕೊಳ್ಳುವುದು. ಇದರಲ್ಲಿ ಕಾಲಪ್ರಮಾಣವು ತಪ್ಪಿಲ್ಲದೆ ಗೊತ್ತಾಗುವುದು. ಈ ಬಟ್ಟಲಿಗೆ ಘಳಿಗೆವಟ್ಟಲೆಂದು ಹೆಸರು. ಪೂರ್ವದಲ್ಲಿ ಘಡಿಯಾರಕ್ಕೆ ಬದಲಾಗಿ ಇದನ್ನು ಉಪಯೋಗಿಸಿ ಒಳ್ಳೆಯ ಮುಹೂರ್ತಗಳನ್ನು ಕಂಡುಹಿಡಿಯುತ್ತಿದ್ದರು. ಜೀವಕೇಂದ್ರ-ಲಗ್ನಕ್ಕೆ ೪-೭-೧೦ನೆಯ ಸ್ಥಾನಗಳಿಗೆ ಕೇಂದ್ರವೆಂದು ಸಂಜ್ಞೆ. ಈ ಕೇಂದ್ರಸ್ಥಾನಗಳಲ್ಲಿ ಗುರುವಿದ್ದರೆ ಆ ಮುಹೂರ್ತವು ಶುಭಕರವಾದುದೆಂದು ಜ್ಯೋತಿಶ್ಶಾಸ್ತ್ರದಲ್ಲಿ ಹೇಳಿದೆ.

(೧೩೭) ಕೇವಣ-ಧ್ವ, ಕ್ಷೇಪಣ-ತ್ಸ, ವಾರಣಘಟಾಳಿ-ಆನೆಯಹಿಂಡಿನ ಸಾಲು.

(೧೩೮) ಪಾಲ್ಮರ-ಹಾಲುಳ್ಳಮರ (ಆಲ, ಅತ್ತಿ, ಅರಳಿ, ಹಿಪ್ಪೆ, ಈ ನಾಲ್ಕು.) ಭಾವಾರ್ಥ-ಹಾಲಹಕ್ಕಿಯು ಪಾಲ್ಮರಗಳಲ್ಲಿ ಕುಳಿತು ಸರಾಗವಾಗಿ ಕೂಗುವುದು, ಕರಿಯಹಕ್ಕಿಗಳು ಜೋಡಿಯಾಗಿಕೂಗುವುದು, ಹಕ್ಕಿಗಳು ಬಲದಿಂದ ಎಡಕ್ಕೆ ಬರುವುದು, ಈಮೂರು ಶುಭಶಕುನಗಳು.

ಹರುಷಪುಳಕದ ಹರಿಹಿನಲಿ ಹಯ ।
ಕರಿವರೂಥಪದಾತಿ ಬಲಸಹಿ ।
ತರಿ ದಿಶಾಪಟಮಲ್ಲ ಬಂದನು ಪಯಣಗತಿಗಳಲಿ ॥
ಪರ ಮಹೀತಳದ ಖಿಲಜನದು ।
ಬ್ಬರದ ದರುಶನ ಕಾಣಿಕೆಯ ನನು ।
ಕರಿಸುತ ನುಪಮವಿಷಯ ವೀಥಿಯನೋಡುತೈತಂದ ॥ ೧೩೯ ॥

ಹೇಳಲೇನದ ನಂಗಧರಣೀ ।
ಪಾಲನವನಿಯ ಸಿರಿಯ ಹೊಗಳಲು ।
ಶೂಲಿಗಳವಲ್ಲೆನಲು ಶೋಭಿಸಿ ತಂದು ಸೊಗಸಿನಲಿ ॥
ಶೈಲವೇ ಸುರಶೈಲ ಭೂರುಹ ।
ಜಾಲವೇ ಸುರಭೂಜ ಲಲಿತ ಲ ।
ತಾಳಿಯೇ ಸುರಲತೆ ಸುಧೇನುಗ ಳೈದೆ ಸುರಧೇನು ॥ ೧೪೦ ॥

ವರ ವಸಂತನ ಬೀಡೊ ಮನ್ಮಥ ।
ಧರಣಿಪನ ದೆಖ್ಖಾಳ ಭೂಮಿಯೊ ।
ಪರಿಮಳಿತ ಪವಮಾನ ನಾಡುಂಬೊಲನೊ ಚಂದ್ರಮನ ॥
ಹರವರಿಯೊ ವನದೇವತೆಯ ವಿ ।
ಸ್ತರ ವಿನೋದ ವಿಹಾರ ಕೇಳೀ ।
ನಿರತಿಶಯ ನಿಜಧರಣಿಯೋ ಯೆನೆ ಮೆರೆದುದಾ ಭೂಮಿ॥ ೧೪೧ ॥

ನಗರಖರ್ವಟ ಖೇಟಿಗಳ ಹೆಂ ।
ಪುಗಳ ಶಾಖಾನಗರಗಳ ಸೊಂ ।
ಪುಗಳ ಸುಗ್ರಾಮಾಗ್ರಹಾರವ್ರಜ ದಲಂಪುಗಳ ॥

(೧೩೯ ಅರಿದಿಶಾಪಟಮಲ್ಲ-ಶತ್ರುಗಳನ್ನು ನಾನಾದಿಕ್ಕುಗಳಿಗೂ ಓಡಿಸಿರುವ ಶೂರನು; ವಿಷಯವೀಥಿ-ದೇಶದಬೀದಿ.

(೧೪೦) ಶೂಲಾಯುಧವನ್ನು ಧರಿಸಿದವನು-ಶೂಲಿ (ಈಶ್ವರ) ಆದನು + ಅಂಗಧರಣೀಪಾಲ ಅಂಗರಾಜನ ರಾಜ್ಯದಲ್ಲಿರುವ ಸಸ್ಯಗಳೂ ಪ್ರಾಣಿಗಳೂ ದೇವಲೋಕದಲ್ಲಿರುವವುಗಳಂತೆ ಶ್ರೇಷ್ಠತರವಾದುವುಗಳೆನ್ನಿಸಿಕೊಂಡಿದ್ದುವು ಎಂದು ಭಾವವು.

(೧೪೧)ಮನಸ್-ಮನಸ್ಸನ್ನು, ಮಥ-ಕಡೆಯುತಕ್ಕವನು-ಮನ್ಮಥ; ಭೂಮಿ-ತ್ಸ,ಭುವಿ-ದ್ಭ.

(೧೪೨) ತ್ಸ-ಕಳಮ, ದ್ಭ, ಕಳಪೆ, ಖರ್ವಟಖೇಟ; ಹೆಂಪು, ಸೊಂಪು, ಅಲಂಪು; ದ್ರಾಕ್ಷೆ ಇಕ್ಷು, ಈಕ್ಷಿಸು, ಈ ಸ್ಥಳಗಳಲ್ಲಿ ಬಂದೇ ವ್ಯಂಜನವು ಅನೇಕಾವೃತ್ತಿ ಬಂದಿರುವುದರಿಂದ ವೃತ್ತ್ಯನು

ತೆಗೆದ ತೊರೆಕಾಲುವೆಗಳು ದ್ರಾ।
ಕ್ಷೆಗಳ ಕಳಮ ದ್ರಾಕ್ಷೆಧವಳೀ।
ಕ್ಷುಗಳ ವನವೀಥಿಗಳ ನೀಕ್ಷಿಸುತರಸ ನಡೆತಂದ ॥ ೧೪೨ ॥

ಆರರೆ ಶಿವಶಿವ ಸಕಲಸಿರಿಯಲಿ।
ಮೆರೆವು ದುರೆ ತಾ ಋಷ್ಯಶೃಂಗನ।
ಪರಮ ಮಹಿಮೆಯಲಾ ಮಹೀತಳ ವೆನುತ ನರನಾಥ॥
ಶಿರವನೊಲೆಯುತ ರೋಮಪಾದನ।
ಸಿರಿಯ ಕೊಂಡಾಡುತ ಸುಮಿತ್ರನ।
ಪುರಕೆ ಬಂದನು ಕೇಳಿದೈ ಕಾಕುಸ್ಥ ನೃಪಸೂನು ॥ ೧೪೩ ॥

ರಾಯರಾಜಶಿರೋಮಣಿಯ ಕಟ।
ಕಾಯ ಬಿಟ್ಟುದು ಬಳಸಿಕೊಟ್ಟಿಗೆ।
ಲಾಯ ಗುಡಿ ಗೂಡಾರ ಸಹಿತ ಪುರೋಪ ಕಂಠದಲಿ॥
ಆ ಯಶಃಪರಿ ಪೂರ್ಣತೇಜನ।
ಮೇಯ ನನುಪಮ ರೋಮಪಾದನು।
ಜೀಯ ದಶರಥನೃಪ ನಿದಿರ್ಗೊಂಡೊಯ್ದು ನರಮನೆಗೆ ॥ ೧೪೪ ॥

ಹೇಳಲೇನದ ನಂದಿನುತ್ಸವ।
ದೇಳಿಗೆಯ ವೈಭವವನು ಭಯನೃ।
ಪಾಲಕರ ಸೌಹಾರ್ದ ದನುಬಂಧದ ಸಘಾಡಿಕೆಯ॥
ಬಾಲೆಯರ ಹೊಂದಳಿಗೆಗಳ ಪಸು।
*ರ್ಗೊಳುಗಳ ಪಸರಿಕೆಯ ಮಣಿದೀ।
ಪಾಳಿ ಸುಳಿದುವು ಬಿಸಜಬಾಂಧವ ಕುಲಜ ನಿದಿರಿನಲಿ ॥ ೧೪೫ ॥

ಪ್ರಾಸವೆಂಬ ಶಬ್ದಾಲಂಕಾರವಿದೆ. ಪಿರಿದರಭಾವ-ಪೆಂಪು, ಪಕಾರಕ್ಕೆ ಹಕಾರಾದೇಶವುಬಂದು ಹೆಂಪು ಎಂದಾಗಿದೆ (ತದ್ಧಿತಭಾವನಾಮ.)

(೧೪೩) ಈ ಅಂಗರಾಜ್ಯವು ಋಷ್ಯಶೃಂಗಮುನಿಯ ಮಹಾತ್ಮ್ಯಯಿಂದಲೇ ಇಂತಹ ಐಶ್ವರ್ಯದಿಂದ ಮೆರೆಯುತ್ತಿರುವುದೆಂದು ದಶರಥನು ತಲೆದೂಗುತ್ತ ಬಂದನು.

(೧೪೪) ತೇಜನು, ಅಮೇಯನು, ಅನುಪಮ ರೋಮಪಾದನು, ಜೀಯದಶರಥನ; ನೃಪನ ಎಂದುಪದಚ್ಛೇದವು. ಕಟಕಾಯ-ಸೈನ್ಯದವಿಸ್ತಾರವು.

(೧೪೫) ಅನ್ವಯಃ-ಉಭಯ.........ಸಘಾಡಿಕೆಯ ಅಂದಿನುತ್ಸವದೇಳಿಗೆಯ ವೈಭವವನು ಅದನು ಹೇಳಲೇನು? ಬಿಸಜಬಾಂಧವಕುಲಜನ ಇದಿರಿನಲಿ ಬಾಲೆಯರ.........ದೀಪಾಳಿಗಳು ಸುಳಿದುವು; ಪೂರ್ವದಲ್ಲಿ ಸ್ತ್ರೀಯರು ಚಿನ್ನದಅನ್ನವನ್ನೂ, ದೀಪಗಳನ್ನೂ ತಟ್ಟೆಯಲ್ಲಿತಂದು ದೃಷ್ಟಿಪರಿಹಾರಕ್ಕೂ, ರಾಜಮರ್ಯಾದೆಗೂ ಆರತಿಯನ್ನು ಬೆಳಗುವ ಪದ್ಧತಿಇತ್ತು. ಬಿಸ-ದಂಟನಿಂದ, ಜ-ಹುಟ್ಟಿದುದು (ಕಮಲ) ಅದಕ್ಕೆ ಬಾಂಧವ-(ಸೂರ್ಯ)

ಉಪಚರಿಸಿದನು ಬಳಿಕ ರಾಜಾ ।
ಧಿಪನ ನವರಾಜೋಪಚಾರದ ।
ವಿಪುಳಸತ್ಕಾರದಲಿ ನಿರುಪಮ ರೋಮಪಾದ ನೃಪ ॥
ಅಪರಿಮಿತ ಸಂತೋಷದಲಿ ಭೂ ।
ಮಿಪನ ಗಮನ ವನರಿದು ತಂದನು ।
ತಪನ ಕುಲಜನ ಮುನಿಯ ಮಂದಿರಕಾಗಿನಲವಿನಲಿ ॥ ೧೪೬ ॥

ಅರಸದಶರಥ ನಾವಿಭಾಂಡಕ ।
ವರ ಕುಮಾರನ ಚರಣದಲಿ ತ ।
ನ್ನರಸಿಯರು ಸಹ ದೈನ್ಯವೃತ್ತಿಯ ಭಕ್ತಿಭಾವದಲಿ ॥
ಉರುಳುವ ಶ್ರುಕಣಾ ಳಿಗಳ ಕಾ ।
ಹುರತೆಯಲಿ ವ್ಯೈಯಿಕ್ಕಿದನು ಸುತ ।
ವಿರಹಿತನ ವಂಶಚ್ಯುತನ ನುದ್ಧರಿಸಬೇಕೆಂದು ॥ ॥ ೧೪೭ ॥

ಸುತವಿನುತ ಕಾಮ್ಯಾಧ್ವರದ ಸ ।
ತ್ಕ್ರತುವ ಕೈಕೊಂಡೆನು ಭವತ್ಕೃಪೆ ।
ಯತಿಶಯವು ತನಗಾಗೆ ತಾನೀ ಜಗಕೆ ಧನ್ಯನಲ ॥
ಸುತ ವಿಹೀನ ನುದ್ಧರಿಸಿ ಸಂ ।
ತತಿಯ ಕರುಣಿಸ ಬೇಕೆನುತ ಮುನಿ ।
ಪತಿಯ ಪದಪದ್ಮದಲಿ ಮುಗುಳಿಳುಹಿದನು ಮಣಿಶಿರವ ॥ ೧೪೮ ॥

ಕರುಣರಸ ದುಬ್ಬರದ ಲರಸನ ।
ಶಿರವ ನೆಗಹಿ ವರೋಕ್ತಿಯಲಿ ಮುನಿ ।
ಹರಸಿ ಸಂತಾನಾಭಿವೃದ್ಧಿಯ ಸಾರಸೌಖ್ಯದಲಿ ॥
ಅರಸನನು ಮನ್ನಿಸಿ ಮನಃಪರಿ ।
ಸರದ ಖೇದವ ಬಿಡಿಸಿ ಕಾಮ್ಯಾ ।
ಧ್ವರಕೆ ಬಹೆವೆಂ ದಭಯವಿತ್ತನು ಋಷ್ಯಶೃಂಗಮುನಿ ॥ ೧೪೯ ॥

(೧೪೬) ಅನ್ವಯ-ರೋಮಪಾದನೃಪ ಅಪರಿಮಿತಸಂತೋಷದಲಿ (ಬಂದಿರುವ) ಭೂಮಿಪನ ಗಮನವನರಿದು, ತಪನಕುಲಜನ ಮುನಿಯ ಮಂದಿರಕಾಗಿ ನಲವಿನಲಿ ತಂದನು.

(೧೪೭) ಕಾಳ್ವರ-ಎಂಬ ಶಬ್ದದಿಂದ ಉತ್ತರಮಾರ್ಗದಲ್ಲಿ ಕಾಹುರ, ಎಂದಾಗಿ ಭಾವಾರ್ಥದಲ್ಲಿ 'ತೆ' ಎಂಬ ಪ್ರತ್ಯಯವುಸೇರಿ ಕಾಹುರತೆ ಎಂದಾಯ್ತು.

(೧೪೮) ಸುತರಿಂದೆ + ವಿಹೀನ-ಸುತವಿಹೀನ(ತೃ. ತ)ಮಣಿಗಳಿಂದ(ಕೂಡಿದ) + ಶಿರ-ಮಣಿಶಿರ (.ಉ ಮ. ಕರ್ಮ. ಸ)

(೧೪೯) ಮನಃಪರಿಸರದಖೇದವ-ಮನಸ್ಸನ್ನು ಆವರಿಸಿರುವ ದುಃಖವನ್ನು, ಬರ್ಪೆವು ಎಂಬುದಕ್ಕೆ ಉತ್ತರಮಾರ್ಗದಲ್ಲಿ ಬಹೆವು ಎಂದಾಗಿದೆ ಅಭಯಮಂ + ಇತ್ತನು (ಕ್ರಿ. ಸ)

ವೀರ ಕೇಳ್ಮೈ ನಿಮ್ಮ ದಶರಥ ।
ಧಾರಿಣೀಶಂಗ ಭಿನವದ ಬೀ ।
ಡಾರ ವಾಯ್ತುರೆ ತಿಂಗಳಿದ್ದನು ಮೇಲೆ ತತ್ಪುರದಿ ॥
ಧಾರಿಣೀಶನ ನುಚಿತ ವಚನಾ ।
ಸಾರದಲಿ ಸರ್ವಾಭರಣ ಮದ ।
ವಾರಣಾಶ್ವ ವರೂಥ ವಸನಗಳಿಂದ ಮನ್ನಿಸಿದ ॥ ೧೫೦ ॥

ಕರಿಸಿ ಮಂತ್ರಿನಿಯೋಗಿಗಳ ನಾ ।
ಪುರಜನಂಗಳ ನುಡುಗೊರೆಗಳಲಿ ।
ಹಿರಿದು ಮನ್ನಿಸಿ ರೋಮಪಾದ ಮಹಾಮಹೀಪತಿಯು ॥
ಪರಮ ಸತ್ಕಾರವನು ಕೈಕೊಂ ।
ಡರಸ ಮುನಿಪತಿಸಹಿತ ಯೋಧ್ಯಾ ।
ಪುರಕೆ ಬಂದನು ಬಹುಳವಿಭವದ ಲಖಿಳಜನ ನಲಿಯೆ ॥ ೧೫೧ ॥

ಮುನಿಪತಿಯು ನವನೀಶ ಮುನಿಭಾ ।
ವನೆಯಲೇ ಪೂಜಿಸಿ ಬಳಿಕ್ಕರ ।
ಮನೆಯ ನಿಕಟ ಪ್ರಾಂತವಲಿ ಬೀಡಾರವನು ರಚಿಸಿ ॥
ಮುನಿವಸಿಷ್ಠನ ಕರಿಸಿದನು ವರ ।
ಮುನಿವಸಿಷ್ಠನ ತನ್ಮುನೀಂದ್ರನ ।
ವಿನುತ ವಚನಾ ನುಜ್ಞೆಯಲಿ ಕೈಕೊಂಡ ನಧ್ವರವ ॥ ೧೫೨ ॥



(೧೫೦) ಉಚಿತವಚನಾಸಾರದಲಿ-ತಕ್ಕ ಉಪಚಾರೋಕ್ತಿಗಳ ಧಾರೆಯಿಂದ. (ಅನೇಕ ಉಪಚಾರಗಳಿಂದ).

(೧೫೧) ಕರಿಸು ಎಂಬ ಉಕಾರಾಂತಧಾತುವಿಗೆ 'ದು' ಎಂಬ ಪ್ರತ್ಯಯವು ಸೇರಿ-ಕರಿಸಿ ಎಂದಾಯ್ತು.

(೧೫೨) ನಿಕಟವಾದಪ್ರಾಂತ-ನಿಕಟಪ್ರಾಂತ (ವಿ. ಪೂರ್ವ. ಕ); ಮುನಿಯಾದ ವಸಿಷ್ಠ-ಮುನಿವಸಿಷ್ಠ (ವಿ. ಪೂರ್ವ. ಕ); ಬಳಿಕ್ಕ-ಇದಕ್ಕೆ ಬಳಿಕ, ಬಳಿಕೆ, ಬಳಿಕಂ, ಬಳಿಕ್ಕಂ ಎಂಬ ರೂಪಾಂತರಗಳವೆ.

## ಏಳನೆಯಸಂಧಿ.

ಸೂಚನೆ ॥ ಭುವನಜನ ಭುಲ್ಲವಿಸೆ ನಿರ್ಜರ ।
ನಿವಹಪತಿ ಪರಿಣಮಿಸೆ ಯಜ್ಞ ।
ಪ್ರವರದಲಿ ದಶರಥನು ಪಡೆದನು ಪುತ್ರಪಿಂಡಕವ ॥

ಧರಣಿಜಾಸುತ ಕೇಳು ದಶರಥ ।
ಧರಣಿಪತಿ ಕರಿಸಿದನು ನಾನಾ ।
ಧರಣಿಪಾಲರ ಧರ್ಮನಿಷ್ಠ ವಸಿಷ್ಠ ನಾಜ್ಞೆಯಲಿ ॥
ವರುಷವರುಷದ ವರ್ತನೆಯ ವಿ ।
ಸ್ತರದ ವಸ್ತೂತ್ಕರವ ನವರಲಿ ।
ತರಿಸಿದನು ವರಪುತ್ರಕಾಮೇಷ್ಟಿಯ ಮಹಾಧ್ವರಕೆ ॥ ೧೫೭ ॥

ಕಾಣೆ ನಿನಶಶಿಕುಲದ ರಾಜ ।
ಶ್ರೇಣಿಯಲಿ ತಾ ಬಳಿಕ ದಶರಥ ।
*ಕ್ಷೋಣಿಪಂ ಗೆಣೆಯಹ ನೃಪಾಲರನಖಿಲರಾಯರಲಿ ॥
ಕಾಣಿಕೆಯ ತಂದಿತ್ತ ರಾಗೀ ।
ರ್ವಾಣಪತಿನರರಾಜರುದಿತ ಕೃ ।
ಪಾಣ ತೇಜೋವಿಭವ ವೆಂತುಟೊ ನಿಮ್ಮ ದಶರಥನ ॥ ೧೫೮ ॥

ಪುರವಹೊಗಿದುದು ದಿಲ್ಲವಾ ಸುರ ।
ನರಭುಜಂಗ ಮರಿತ್ತಕಪ್ಪದ ।
ವರ ಸುವರ್ಣ ಸುರತ್ನ ಕನ್ಯಾವಸನ ವಸ್ತುಗಳ ॥
ಸರಯುವಿನ ತೀರದಲಿ ಯೋಜನ ।
ವೆರಡರಳತೆಯ ವಿಶ್ವ ಕರ್ಮೋ ।
ದ್ಧರಣ ರಮ್ಯಾಗಾರದಲಿ ಬಿಡಿಸಿದನು ಭೂಪಾಲ ॥ ೧೫೯ ॥

(೧೫೭) ವರುಷವರುಷದವರ್ತನೆಯ-ಪ್ರತಿವರ್ಷದಲ್ಲಿಯೂ ಅಧಿರಾಜರು ಒಪ್ಪಿಸಬೇಕಾದ, ವಿಸ್ತರದವಸ್ತೂತ್ಕರವನು-ಕಪ್ಪ ಕಾಣಿಕೆಮೊದಲಾದ ಪದಾರ್ಥಗಳಸಮೂಹವನ್ನು.

(೧೫೮) ಕ್ಷೋಣಿ-ಭೂಮಿಯನ್ನು, ಪ-ಪಾಲಿಸತಕ್ಕವನು, ಕ್ಷೋಣಿಪ(ದೊರೆ), ಗೀರ್ವಾಣಪತಿ... ದಶರಥನ:-ದೇವತೆಗಳರಾಜನಾದ ಇಂದ್ರನೂ, ಮನುಷ್ಯರಿಗೆ ಒಡೆಯರಾಗಿದ್ದ ಅನೇಕ ರಾಜರೂ ದಶರಥ ರಾಜನಿಗೆ ಕಾಣಿಕೆಗಳನ್ನು ತಂದೊಪ್ಪಿಸಿದರು. ಆದಕಾರಣ ದಶರಥನ ಬಲಪ್ರಭಾವವು ಇಷ್ಟರಮಟ್ಟಿಗಿದೆ ಯೆಂದನ್ನು ಹೇಳುವುದು ಸಾಧ್ಯವಲ್ಲ. ಸ್ವರ್ಗಮರ್ತ್ಯಲೋಕಗಳಲ್ಲಿ ಅವನನ್ನು ಪ್ರತಿಭಟಿಸತಕ್ಕವರು ಯಾರೂ ಇರಲಿಲ್ಲ ವೆಂಬ ಭಾವವು.

(೧೫೯) ವಿಶ್ವಕರ್ಮೋದ್ಧರಣ-ವಿಶ್ವಕರ್ಮನಿಂದ ನಿರ್ಮಾಣಮಾಡಲ್ಪಟ್ಟ, ದೇವತೆಗಳ ಬಡಗಿಗೆ ವಿಶ್ವಕರ್ಮನೆಂದುಹೆಸರು. ರಾಕ್ಷಸರಬಡಗಿ ಮಯನು.

ತೆಗಿಸಿದನು ಬಳಿಕಿನಕುಲದ ಪೀ।
ಳಿಗೆಯ ನೃಪರಾರ್ಜಿಸಿದ ನಾನಾ।
ಯುಗಯುಗಂಗಳ ನಾಣೆಯಂಗಳ ನಖಿಳರತ್ನಗಳ।
ನಗರ ದುಪಕಂಠದಲಿ ಕೋಟಿಯ।
ಬಿಗಿಸಿ ಬಿಡಿಸಿದ ನಧ್ವರಕೆ ಸಲು।
ವ ಗಣಿತಾಖಿಲ ವಸ್ತುಗಳ ನೆರಹಿದನು ನರನಾಥ ॥ ೧೫೬ ॥

ವರಸುವರ್ಣ ಸುರತ್ನಸರ್ವಾ।
ಭರಣ ಭವನಂಗಳಿಗೆ ಗಾವುದ।
ವೆರಡರಲಿ ಹವಣಿಸಿತು ನಿಖಿಳಾಂಬರಸುಗಂಧಗಳ।
ಇರವು ಗಾವುದಮೂರರಲಿ ಕರಿ।
ತುರಗ ಕನ್ಯಾಧೇನು ಮುಖ್ಯಾ।
ಧ್ವರದ ದಾನದ್ರವ್ಯಕಾಯ್ತೇಳರ ಸಮಾಪ್ತಿಯಲಿ ॥ ೧೫೭ ॥

111270

ಪರಿಕಲಿತ ನಾನಾಫಲದ ಪರಿ।
ಪರಿಯ ಧಾನ್ಯವ್ರಜಕೆ ಗುಡಶ।
ರ್ಕರೆಗೆ ಸಂಭಾರಕ್ಕೆ ತೆರಹಾಯ್ತೆಂಟೆರಳತೆಯಲಿ।
ವರದವಜ್ರದ ಗಾರೆಗಳ ಹೊ।
ಕ್ಕರಣೆಗಳ ಸಾಲುಗಳ ಯೋಜನ।
ವೆರಡರಲಿ ಘೃತತೈಲ ದುಗ್ಧಾದಿಗಳಿಗೆಡೆಯಾಯ್ತು ॥ ೧೫೮ ॥

ತರುಣ ಕೇಳ್ ಹನ್ನೆರಡು ಯೋಜನ।
ವರೆಯ ಭೋಜನಶಾಲೆಗಳು ವಿ।
ಸ್ತರಿಸಿದುವು ಬಾಣಸದ ಭವನಂಗಳು ಸುವೀಧಿಯಲಿ।

(೧೫೬) ಯಾಗಕ್ಕೆ ಬಹುದ್ರವ್ಯವು ಬೇಕಾಗಿದ್ದುದರಿಂದ ತನ್ನಲ್ಲಿಸಿದ್ಧವಾಗಿರುವ ದ್ರವ್ಯವು. ಸಾಲದೆ, ಸೂರ್ಯವಂಶದ ಪೂರ್ವರಾಜರುಕೂಡಿಟ್ಟದ್ದ ಅಯಾಕಾಲದ ನಾಣ್ಯಗಳೆಲ್ಲವನ್ನೂ ತೆಗೆಯಿಸಿದನು

(೧೫೭) ಅನ್ವಯ-ವರಸುವರ್ಣ.........ಭವನಂಗಳಿಗೆ, (ಇರವು) ಗಾವುದವೆರಡರಲ್ಲಿ, ಹವಣಿಸಿತು. ನಿಖಿಳಾಂಬರಸುಗಂಧಗಳ ಇರವು, ಗಾವುದಮೂರರಲಿ(ಹವಣಿಸಿತು). ಕರಿತುರಗ...ದ್ರವ್ಯಕ್ಕೆ. ಇರ್ + ಅವು-ಭಾವಾರ್ಥದಲ್ಲಿ ಅವು ಎಂಬಪ್ರತ್ಯಯವುಸೇರಿ-ಇರವು ಎಂದಾಯ್ತು.

(೧೫೮) ತ್ಸ-ಗುಡ; ದ್ಭ-ಗುಳ, ಹೊಕ್ಕರಣೆ-ದ್ಭ, ಪುಷ್ಕರಣಿ-ತ್ಸ; ತಿಲ-ಎಳ್ಳು, ಅದರಿಂದಾದುದು-ತೈಲ (ಎಣ್ಣೆ)

(೧೫೯) ಹನ್ನೆರಡುಯೋಜನವರೆಯು-ಹನ್ನೆರಡು ಯೋಜನದ ಎಲ್ಲೆಯು, ವರೆ ಎಂಬ ಶಬ್ದಕ್ಕೆ ಸೀಮೆಯೆಂದು ಅರ್ಥ.



ಪರಿಪರಿಯುವಹ ಕಾಯಿ ಮೇಲೋ ।
ಗರದ ಮಧುರಾಮ್ಲಾದಿ ಲವಣೋ ।
ತ್ಕರ ಕಟುದ್ರವ್ಯಾದಿಗಳಿ ಗಾಯ್ತುನಿತ ರೊತ್ತಿನಲಿ ॥ ೧೫೯ ॥

ಪರುಠವಿಸಿದರು ವಿವಿಧಗವ್ಯದ ।
ಸರಸಿಗಳ ಸಂವೇಶದಲಿ ಕೊ ।
ಪ್ಪರಿಗೆ ಯಂತ್ರದ್ರೋಣಿಗಳ ರಾಟಾಳಸೂತ್ರಗಳ ॥
ನಿರತಿಶಯ ಯಜ್ಞೋಪಕರಣದ ।
ಪರಿಪರಿಯ ಸಂಭಾರಚಯ ಗೋ ।
ಚರಿಸಿದುದು ಗುರುವರವಶಿಷ್ಠ ಮುನೀಂದ್ರನಾಜ್ಞೆಯು ॥ ೧೬೦ ॥

ಬರೆಯಿಸಿತು ಬಳಿಕೋಲೆ ಮಣಿಹಾ ।
ರರಿಗೆ ಹೇಳಿಕೆಯಾಯ್ತು ಶಿಷ್ಟರ ।
ಪರುಠವಿಸಿ ಕಳುಹಿದನು ಪಾವುಡ ಸಹಿತ ಪಾರ್ಥಿವರ ॥
ಪುರಗಳಿಗೆ ಕೇಕಯಧರಾಧೀ ।
ಶ್ವರಗೆ ಕಾಶೀಪತಿಗೆ ನಿಮಿಕುಲ ।
ದರಸನಿಗೆ ಮಗಧನಿಗೆ ನಿರುಪಮ ರೋಮಪಾದಂಗೆ ॥ ೧೬೧ ॥

ಉಳಿದ ಚತುರಂಭೋಧಿವೃತ ಭೂ ।
ತಳದ ಭೂಪಾಲರಿಗೆ ದೂತರ ।
ಕಳುಹಿದನು ಕಳುಹಿದನು ಋಷಿಗಳಿಗತ್ರಿ ಮೊದಲಾದ ॥
ಇಳೆಯೊಳುಳ್ಳ ಸಮಸ್ತ ಮುನಿಸಂ ।
ಕುಳಕೆ ಸದ್ವಿನಯಾಭಿನಮಿತಾಂ ।
ಜಳಿಯು ಭಯಭಕ್ತಿಯಲಿ ಭೂಪತಿ ಬಿನ್ನವತ್ತಳೆಯ ॥ ೧೬೨ ॥

ಬಣ್ಣಿಸದಭವನಂಗಳು ವಿಸ್ತರಿಸಿದುವು ಅನಿತರೊತ್ತಿನಲಿ, ಪರಿಪರಿಯ............ದ್ರವ್ಯಾದಿಗಳಿಗೆ (ಸ್ಥಳವು) ಆಯ್ತು, ಎಂದನ್ವಯವು.

(೧೬೦) ಗೋಸಂಬಂಧವಾದುದು-ಗವ್ಯ (ಹಾಲು, ಮೊಸರು, ತುಪ್ಪ ಮೊದಲಾದುದು). ಸರಸಿ-ದ್ಭ, ತ್ಸ-ಸರಸ್; ದ್ರೋಣಿ-ತ್ಸ, ದೋಣಿ-ದ್ಭ; ವಶಿಷ್ಠ-ಇಂದ್ರಿಯ ನಿಗ್ರಹಮಾಡಿದವನು (ವಶಿಷ್ಠ) ಯಜ್ಞ-ತ್ಸ, ಜನ್ನ-ದ್ಭ.

(೧೬೧) ಪಾವುಡಸಹಿತ-ವಸ್ತ್ರಗಳೊಡನೆ-ಲಗ್ನ ಪತ್ರಿಕೆಗಳನ್ನು ಕಳುಹಿಸಿಕೊಡುವಾಗ ಉಡು ಗೊರೆಯನ್ನು ಕಳುಹಿಸಿ ಕೊಡುವುದು ಪೂರ್ವಸಂಪ್ರದಾಯವು.

(೧೬೨) ಭೂಪತಿ ಉಳಿದ.........ಭೂಪಾಲರಿಗೆ ದೂತರ ಕಳುಹಿದನು, ಅತ್ರಿ ಮೊದಲಾದ......... ಸಂಕುಳಕೆ .........ಭಯಭಕ್ತಿಯಲಿ ಬಿನ್ನವತ್ತಳೆಯ ಕಳುಹಿದನು, ಎಂದನ್ವಯವು.

ದ್ಭ-ಬಿನ್ನವತ್ತಳೆ, ತ್ಸ-ವಿಜ್ಞಾಪನಾಪತ್ರಿಕಾ.

ಬಳಿಕ ನೆಲೆಶೋಧಿಸಿತು ಸವದ ।
ಸ್ಥಳಕೆ ಸುಮುಹೂರ್ತದಲಿ ವೈದಿಕ ।
ವಿಳಸದಲಿ ವಿಧಿವಿಹಿತದಲಿ ಸರಯುವಿನ ತೀರದಲಿ ॥
ನಿಳಯಗಳು ನಿರ್ಮಿಸಿದುವಧ್ವರ ।
ಲಲಿತ ಶಾಲಾವಳಿಯ ಸೌಧಾ ।
ವಳಿಯ ಸಂರಂಭದಲಿ ಶಶಿಸೂರ್ಯ ಪ್ರಭಾನ್ವಿತದ ॥ ೧೬೩ ॥

ಕೇಳಿದೈ ಕುಶಬಳಿಕ ಭೋಜನ ।
ಶಾಲೆಯಂ ತರ್ವೇದಿ ಪಙ್ಕ್ತೀ ।
ಶಾಲೆ ಮುಖಶಾಲಾದಿ ನಾನಾ ವಿಧದ ಶಾಲೆಗಳ ॥
ಸಾಲು ಮೆರೆದುವು ಸೊಗಸಿದುವು ಸಂ ।
ಸ್ಥೂಲತರ ವೇದಿಗಳು ವಿಮಳ ವಿ ।
ಶಾಲ ವಿಪ್ರ ಸದಸ್ಸುಗಳು ಸಭೆಗಳು ಧರಾಧಿಪರ ॥ ೧೬೪ ॥

ಚಾರುತರ ಮುಖವೆರಡರ ಮಖಾ ।
ಗಾರ ಮಂಟಪವಳಯದಲಿ ಕ ।
ರ್ಪೂರ ಧೂಳಿಸಿತಿಕ್ಕೆಲದ ಮಾಲೆಗಳು ಮೌಕ್ತಿಕದ ॥
ತೋರಣಗಳು ಪ್ಪರಿಸಿದುವು ಬಿಂ ।
ಗಾರಿಬಿಗಿದುವು ಬಹುಳಕದಳೀ ।
ಸಾರದಲಿ ಸಂಭ್ರಮಿಸಿದುವು ಸೌಧಾಳಿ ನಾಲ್ದೆಸೆಯ ॥ ೧೬೫ ॥

ತಳಿತ ಪಲ್ಲವ ಸತ್ತಿಗೆಯ ಹೊಂ ।
ಗಲಶಗಳ ಹೊದರೆದ್ದ ಝಲ್ಲರಿ ।
ಗಳ ವಿಚಿತ್ರಾಂಬರದ ಮುತ್ತಿನಮೇಲುಕಟ್ಟುಗಳ ॥

(೧೬೩) ಶೋಧಿಸಿತು, ನಿರ್ಮಿಸಿದುವು; ಎಂಬ ಕ್ರಿಯಾಪದಗಳು ಇಲ್ಲಿ ಕರ್ತ್ರರ್ಥಗಳಲ್ಲ; ಕರ್ಮಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿವೆ. ಬಳಿಕ ಸವದ.........ತೀರದಲಿ ನೆಲೆಶೋಧಿಸಿತು,-ಒಳ್ಳೆಯ ಲಗ್ನದಲ್ಲಿ ವೇದೋಕ್ತಕ್ರಮದಿಂದ ಯಜ್ಞಶಾಲೆಯನ್ನು ಕಟ್ಟುವುದಕ್ಕಾಗಿ ಭೂಮಿಯನ್ನು ಶೋಧಿಸಿದರು.

(೧೬೪) ಸಾಲುಮೆರೆದುವು-ಇಲ್ಲಿ ಬಗೆಬಗೆಯಮನೆಗಳ ಅನೇಕಸಾಲುಗಳಿರುವುದರಿಂದ ಒಂದೇ ಸಾಲಲ್ಲವಾಗಿ ಬಹುವಚನಕ್ರಿಯಾಪದವು ಬಂದಿದೆ. (ಸಾಲುಗಳು ಮೆರೆದುವು) ಎಂಬರ್ಥವು.

(೧೬೫) ಮುಖವೆರಡರ-ಅಶ್ವಮೇಧ ಮತ್ತು ಪುತ್ರಕಾಮೇಷ್ಟಿ ಎಂಬೆರಡು ಯಜ್ಞಗಳ, ಮಖ + ಅಗಾರ = ಮಖಾಗಾರ; ಧೂಳಿ + ಇಸು = ಧೂಳಿಸು-ಎರಚಲ್ಪಡು, ದ್ಭ - ಬಿಂಗಾರ, ತ್ಸ - ಭೃಂಗಾರ;

(೧೬೬) ತಳಿರ್ + ದ = ತಳಿರ್ತ; ಎಂದು ರೂಪವಾಗುವುದು. ಉತ್ತರಮಾರ್ಗದಲ್ಲಿ 'ತಳಿತ' ವೆಂದಾಗಿದೆ. ಈ ಪದ್ಯದಲ್ಲಿ ರಂಜಿಸಿದುವು, ಎಂಬಕ್ರಿಯೆಗೆ ಕರ್ತೃಪದವಿಲ್ಲದುದರಿಂದ 'ಸೌಧಗಳು' ಎಂದು ಅಧ್ಯಾಹಾರಮಾಡಿಕೊಳ್ಳಬೇಕು.

ನೆಲೆನೆಲೆಯ ಲೋವೆಗಳ ಮುಕ್ತಾ ।
ಫಲದ ಸಡಕಿನ ಸೂಸಕದ ಲಂ ।
ಬಳದ ಲಳಿಗಳ ಲಹರಿಯಲಿ ರಂಜಿಸಿದುವನವರತ ॥ ೧೬೬ ॥

ಸವೆದು ವೀಪರಿ ಸಪ್ತತಂತು ।
ಪ್ರವರ ದಧಿಕೃತರಚಿತ ನಾನಾ ।
ಭುವನ ಭೂಮೀದೇವ ಭೂಭುಜ ವೈಶ್ಯ ಶೂದ್ರರಿಗೆ ॥
ವಿವಿಧ ವರ್ಣಾಶ್ರಮರಿ ಗಾದುವು ।
ಭವನ ಬಹಿರಾವರಣದಲಿ ಮುಖ ।
ಸವನ ಸಾಧನ ವಸ್ತುಚಯ ಸೊಗಸಿದುವು ನಿಮಿಷದಲಿ ॥ ೧೬೭ ॥

ಕೇಳಿಸಿತು ಬಳಿಕಖಿಲ ಪೃಥ್ವೀ ।
ಪಾಲ ಪಜ್ತಿಯೊ ಳಶ್ವಮೇಧ ವಿ ।
ಶಾಲ ಸುತಕಾಮೇಷ್ಟಿ ಯ ಧ್ವರವಾರ್ತೆ ನಿಮಿಷದಲಿ ॥
ಮೇಲು ಮೇಲುಬ್ಬರದ ಗಮನದ ।
ಜಾಳಿಯಲಿ ಬರುತಿರ್ದುದಂಬುಧಿ ।
ಮೇಲೆ ಯಂತರ್ವಿಷಯದ ವನೀಪಾಲಸಂದೋಹ ॥ ೧೬೮ ॥

ಜನಕ ಕಾಶೀರಾಜ ಕೇಕಯ ।
ಜನಪನಂಗಾಧೀಶಮಗಧಾ ।
ವನಿಯ ಪತಿ ಮಾದ್ರೀಶ ಮಾಳವ ಮರುಮಹೀಪಾಲ ॥
ವಿನುತ ಘೂರ್ಜರ ಗೌಳ ಕೇರಳ ।
ಜನಪದಾದಿಸಮಸ್ತನೃಪರೊ ।
ಗ್ಗಿನಲಿ ಬಂದರು ಭಾಸ್ಕರಾನ್ವಯ ನಮಳಪುರವರಕೆ ॥ ೧೬೯ ॥

(೧೬೭) ಸಪ್ತತಂತುಪ್ರವರದಧಿಕೃತರಚಿತ–ಸಪ್ತತಂತು ಪ್ರವರದ + ಅಧಿಕೃತ + ರಚಿತ; ಶ್ರೇಷ್ಠವಾದ ಯಜ್ಞದ ಅಧಿಕಾರಿಗಳಿಂದ ನಿರ್ಮಿಸಲ್ಪಟ್ಟದ್ದು. ಮುಖಸವನ–ಯಜ್ಞದಲ್ಲಿ ಮಾಡಬೇಕಾದ ಹೋಮ.

(೧೬೮) ಅಂಬುಧಿ–ಸಮುದ್ರವೇ, ಮೇಲೆ–ಮೇರೆಯಾಗಿರುವದು, (ಭೂಮಿ). ಅಂತರ್ವಿಷಯದ–ದೇಶಗಳಲ್ಲಿರುವ.

(೧೬೯) ಮಾದ್ರೀಶ–ಮದ್ರದೇಶದ ದೊರೆ; ಭಾಸ್–ಕಾಂತಿಯನ್ನು, ಕರ–ಉಂಟುಮಾಡುವವನು ಭಾಸ್ಕರ (ಸೂರ್ಯ) ಪುರಗಳಲ್ಲಿ ವರ–ಪುರವರ(ಸ. ತ.)

ಲಾಳ ಚೋಳವರಾಳ ವರಬಂ ।
ಗಾಳ ಬಾಹ್ಲಿಕ ಭೋಜವರ ಪಾಂ ।
ಚಾಳ ಪುಷ್ಕರ ಪಾರಿಯಾತ್ರ ಕರೂಷಕಾಂಭೋಜ ॥
ಕೌಳವಾಂಧ್ರ ಕಳಿಂಗಕುರು ನೇ ।
ಪಾಳನಿಷಧ ವಿದರ್ಭ ಧರಣೀ ।
ಪಾಳಕತಿ ಸಂದಣಿಸಿದುದು ಸಾಕೇತನಗರಿಯಲಿ ॥ ೧೭೦ ॥

ಕುರುಮಹೀತಳದಮರ ಭಾರತ ।
ವರುಷದನುಪಮ ರಮ್ಯಕದ ಹರಿ ।
ವರುಷವಿಷಯವಿಳಾವೃತದ ಕಿಂಪುರುಷಮಂಡಲದ ॥
ನರಪತಿಗಳೈತಂದರೇ ನ ।
ಚ್ಚರಿಯೊ ದಶರಥಸಾರ್ವ ಭೌಮಕ ।
ನರಸುತನದ ಮಹಾಮಹಿಮೆಯನು ಕುಶನೆ ಕೇಳೆಂದ ॥ ೧೭೧ ॥

ನೆರೆದರೈ ಬಳಿಕತ್ರಿ ಕಣ್ವಾಂ ।
ಗಿರಸಕಾಶ್ಯಪ ಕುಶಿಕಸುತಸುರ ।
ಗುರು ತನೂದ್ಭವ ಗಾರ್ಗ್ಯ ಗೌತಮ ಜಹ್ನುಜಾಬಾಲಿ ॥
ಹರಿತ ಮಾರ್ಕಂಡೇಯ ಮೈತ್ರಾ ।
ವರುಣಿ ಮುದ್ಗಲ ಮುಖ್ಯಮುನಿ ಪಾ ।
ಲರುಗಳಾಸೂರ್ಯಾನ್ವಯನ ಸಾಕೇತನಗರಿಯಲಿ ॥ ೧೭೨ ॥

ಚ್ಯವನ ದತ್ತಾತ್ರೇಯ ಭೃಗುಸಂ ।
ಭವ ಸುತೀಕ್ಷ್ಣ ದೀರ್ಘತಪ ಗಾ ।
ಲವ ಮತಂಗನು ವತ್ಸಜೈಮಿನಿ ಕಂಕನುಪಮನ್ಯು ॥

(೧೭೦) ಕರೂಷ-ಇದೊಂದುದೇಶ; ಇದಕ್ಕೆ ಕರೂಶ, ಎಂದು ಹೆಸರುಂಟು; ಸಾಕೇತ ನಗರಿ-ಅಯೋಧ್ಯಾಪುರ;

(೧೭೧) ವರ್ಷ-ಎಂದರೆ ಜಂಬೂದ್ವೀಪದ ರಾಜ್ಯಭಾಗಗಳು. ಇವು-ನಾಭಿ, ಕಿಂಪುರುಷ, ಹರಿ, ಇಳಾವೃತ, ರಮ್ಯಕ, ಹಿರಣ್ಯ, ಕುರು, ಭದ್ರಾಶ್ವ, ಕೇತುಮಾಲ ಈ ಯೊಂಬತ್ತು. ಇವುಗಳ ರಾಜರು ಜಂಬೂದ್ವೀಪದರಾಜಕುಲಕ್ಕೆ ಸೇರಿದ ಮುಖ್ಯರಾಜರು, ಸರ್ವಭೂಮಿ-ಭೂಮಂಡಲ, ಅದಕ್ಕೆ ಒಡೆಯನಾದವನು-ಸಾರ್ವಭೌಮ (ಚಕ್ರವರ್ತಿ)

(೧೭೨) ಕುಶಿಕಸುತ-ಕುಶಿಕಮುನಿಯಮಗ(ವಿಶ್ವಾಮಿತ್ರ) ಮಿತ್ರಾ ವರುಣರಮಗ-ಮೈತ್ರಾವರುಣಿ(ಅಗಸ್ತ್ಯ)

(೧೭೩) ಭೃಗು-ಭೃಗುವಿನ,ಸಂಭವ-ಮಗನು-ಭಾರ್ಗವ(ಪರಶುರಾಮ, ಅಥವಾ ಶೌನಕ.

ರವಿ ಪಿತಾಮಹ ಮುನಿ ಮೃಕಂಡು ।
ಪ್ರವರ ಶೌನಕಮುಖ್ಯ ಮುನಿ ಪುಂ ।
ಗವರು ಬಂದರು ವರತಪೋಧನಗಣದ ಗಡಣದಲಿ ॥ ೧೭೩ ॥

ವಿವಿಧ ವಿದ್ವಜ್ಜನ ಸುಮಾಂತ್ರಿಕ ।
ನಿವಹ ಗಾಯಕ ಕಥನ ನರ್ತಕ ।
ಕವಿ ವಿದೂಷಕ ವಾದಿ ವಾಗ್ಮಿ ಮಹೇಂದ್ರಜಾಲಕರು ॥
ನವ ವಿನೋದ ವಿದಗ್ಧ ಜಟಿವೈ ।
ಷ್ಣವ ಕಪಾಲಿಕ ಬೌದ್ಧಮುಖ್ಯ ।
ಪ್ರವರ ದಾನಾರ್ಥಿಗಳು ನೆರೆದರು ವಾಜಿಮೇಧದಲಿ ॥ ೧೭೪ ॥

ಜಗದ ಜನಪದದ ರ್ಥಿಗಳು ಶಿ ।
ಲ್ಪಿಗರು ಸರಸ ಸರೀಸೃಪ ಗ್ರಾ ।
ಹಿಗಳು ವಾಮನ ಬಧಿರ ಮೂಕರನಾಥ ರಂಧಕರು ॥
ಹೊಗಳಿಕೆಯ ಪರಿಪರಿಯ ಕೈವಾ ।
ರಿಗಳು ನೆರೆದರು ನಿಮ್ಮಯೋಧ್ಯಾ ।
ನಗರದಲಿ ರಾಜೇಂದ್ರಚಂದ್ರಮ ನಶ್ವಮೇಧದಲಿ ॥ ೧೭೫ ॥

ತರುಣ! ಕೇಳೈ ತುರಗಮೇಧಾ ।
ಧ್ವರದ ಮೇಲಾರೈಕೆನಡೆದುದು ॥
ಪರಮಋಷಿ ಜಾಬಾಲಿ ಮುಖ್ಯಮುನೀಶ ಮಾನ್ಯತೆಯ ॥
ಪರುಠವಣೆ ವಿಜಯಂಗೆ ಸೇರಿತು ।
ಧರಣಿಯಮರರ ದಕ್ಷಿಣೆಯ ವಿ ।
ಸ್ತರಣದೊಡೆತನ ಸಂದುದಧ್ವರದಲಿ ಸುಮಂತ್ರಂಗೆ ॥ ೧೭೬ ॥

(೧೭೪) ನವವಿನೋದವಿದಗ್ಧ-ಹೊಸಹೊಸಚಮತ್ಕಾರಗಳನ್ನು ತೋರಿಸುವುದರಲ್ಲಿ ಪಂಡಿತ,

(೧೭೫) ತ್ಸ-ಮೂಕ, ಧ್ಭ-ಮೂಗ; ಸರೀಸೃಪ-ತೆವಳುತ್ತಾ ನಡೆವುದು (ಹಾವು) ರಾಜೇಂದ್ರ ನು + ಚಂದ್ರಮನಂತೆ-ರಾಜೇಂದ್ರಚಂದ್ರಮ (ಉ. ಉ. ಕರ್ಮ. ಸ)

(೧೭೬) ತುರಗ-ಕುದುರೆಯನ್ನು ಮೇಧ-(ಹೋಮಕ್ಕಾಗಿ) ಕೊಂದು ಮಾಡುವ ಯಜ್ಞ-ಅಶ್ವಮೇಧ. ಪರಮ + ಋಷಿ,= ಪರಮರ್ಷಿ; ಯಣ್‌ಸಂಧಿಯಾಗಬೇಕಾಗಿತ್ತು' ವಿಕಲ್ಪವಾದುದರಿಂದ ಪ್ರಕೃತಿಭಾವವು ಬಂದಿದೆ.

ಕರೆಕರೆದು ಭೋಜನಕೆ ಭೂವಿಾ ।
ಸುರರನಿರಿಸಿ ಸುಗಂಧಮಾಲ್ಯಾಂ ।
ಬರ ಸಮರ್ಪಣೆಗಾದುದೊಡೆತನವಾ ಜಯಂತಂಗೆ ॥
ನೆರೆದ ಯಾಚಕ ಜನವ ಕರೆದುಪ ।
ಚರಿಸಿ ಮನ್ನಿಸುವನಿತು ದೃಷ್ಟಿಯ ।
ಪರಿವಶಕೆ ಸಂದುದು ವಸಿಷ್ಠಮುನೀಂದ್ರನಾಜ್ಞೆಯಲಿ ॥ ೧೭೭ ॥

ಬಯಸಿ ಬೇಡಿದ ವಿವಿಧವಸ್ತು ।
ವ್ರಯಕೆ ಭಾರಕನಾದನಾಕೇ ।
ಕಯ ನೃಪಾಲಕಸುತ ಯುಧಾಜಿತು ಯಜ್ಞವಾಟದಲಿ ॥
ನಿಯತ ದಧಿಘೃತ ದುಗ್ಧ ಗುಡ ಸಂ ।
ಚಯದ ಸಂಭಾರಾದಿ ರಸನಿ ।
ರ್ಣಯಕೆ ಕಟ್ಟಧಿಕಾರ ಸಿದ್ಧಾರ್ಥಂಗೆ ನೆಲೆಯಾಯ್ತು ॥ ೧೭೮ ॥

ಹೆಸರೆನಿಪ ನಾನಾದಿಗಂತದ ।
ವಸುಮತೀಶರನುಚಿತವೃತ್ತಿಯ ।
ಲೊಸಗೆ ಪಡಿಸುವ ಪರುಠವಣೆ ರೋಮಾಂಘ್ರಿಭೂವರನ ॥
ವಶಕೆ ಸಂದುದು ಸಕಲಸೇನಾ ।
ವಿಸರ ವಿವಿಧಪ್ರಜೆಗಳನು ಮ ।
ನ್ನಿಸುವ ಕಟ್ಟಧಿಕಾರವಾಯಿತು ಮಗಧಭೂಪತಿಗೆ ॥ ೧೭೯ ॥

ಆದುದನುಪಮ ಮಂತ್ರಿಗಳಿಗೆ ಗುಳಿ ।
ದಾದ ಸೇವೆಯ ಪರುಠವಣೆ ಮೇ ।
ಲಾದು ದಧಿವಾಸನ ನೃಪಂಗಾಯ್ತಾಗಮೋಕ್ತದಲಿ ॥

(೧೭೭) ದೃಷ್ಟಿ-ದಶರಥನ ಅರಮನೆಯ ಅಧಿಕಾರಿಗಳಲ್ಲೊಬ್ಬನು. ಕರೆಕರೆದು-ಆವೃತ್ತಿಯಲ್ಲಿ ದ್ವಿರುಕ್ತಿ.

(೧೭೮) ಯಜ್ಞವಾಟ-ಯಜ್ಞಮಂಟಪ, ವಾಟ-ಮಾರ್ಗ, ಜಗುಲಿ, ಬೇಲಿ, ದೇಹಭೇದ, ಮಂಟಪ, ಇವು ನಾನಾರ್ಥಗಳು. ಕಡಿದು + ಅಧಿಕಾರ-ಕಟ್ಟಧಿಕಾರ.

(೧೭೯) ರೋಮಾಂಘ್ರಿಭೂವರ-ರೋಮಪಾದ ಮಹಾರಾಜ. ಒಸಗೆಯಂ + ಪಡಿಸು - ಒಸಗೆಪಡಿಸು. (ಕ್ರಿ,ಸ)

(೧೮೦) ಅಧಿವಾಸನ-ದುರ್ಗಾಪೂಜೆ, ಯಜ್ಞ ಮೊದಲಾದ ಕರ್ಮಗಳನ್ನು ಪ್ರಾರಂಭ ಮಾಡುವುದಕ್ಕೆ ಪೂರ್ವದಿನದಲ್ಲಿ ಅರಿಸಿನ,ಗಂಧ ಮೊದಲಾದ ಮಂಗಳದ್ರವ್ಯಗಳನ್ನು ಸ್ಪರ್ಶ ಮಾಡುವುದು-

ಆದಿನಾರಾಯಣನ ಶ್ರುತಿಸಂ* ।
ವಾದ ಪಾರಾಯಣನ ಸುಜನಾ ।
ಹ್ಲಾದ ಸುಖಸಂಪೂರಣನ ನೊಲಿದರ್ಚಿಸಿದ ಭೂಪ ॥ ೧೮೦ ॥

ತರುಣ ಕೇಳ್ಮರುದಿನದ ಲಮೃತೋ ।
ತ್ಸರ ಶುಭೋದಯ ಲಗ್ನದಲಿ ವಿ ।
ಸ್ತರ ಮಹಾಮಂತ್ರಾದಿ ಪೂರಿತವಿವಿಧ ವಿಭವದಲಿ ॥
ಅರಸಿಯರು ಸಹಿತುಲಿವ ಮಂಗಳ ।
ಕರದ ತೂರ್ಯತ್ರಯದ ಲಿಭಕಂ ।
ಧರದ ಲೈತಂದಿಳಿದು ಹೊಕ್ಕನು ಯಜ್ಞಮಂಟಪವ ॥ ೧೮೧ ॥

ಕರಿಸಿದನು ಬಳಿಕಖಿಳ ಪೃಥ್ವೀ ।
ಶ್ವರರಿ ಗನುಪಮ ತುರಗಮೇಧಾ ।
ಧ್ವರದ ಶಾಲಾವರಣ ಸೌಧಾವಳಿಯ ವಳಯದಲಿ ॥
ಹರುಷದಲಿ ಕುಳ್ಳಿದರು ಹರಿವಿ ।
ಷ್ಟರಗಳಲಿ ಮಣಿಬಂಧುರದ ವಿ ।
ಸ್ತರದ ತತ್ಕಾಲೋಚಿತದ ವಿನಿಯೋಗಿ ಜನಸಹಿತ ॥ ೧೮೨

ಸಂದಣಿಸಿದುದು ಸಕಲಮುನಿಜನ ।
ವೃಂದವಾಕ್ರತುಕರ್ಮ ಶಾಸ್ತ್ರ ।
ಚ್ಛಾಂದಸಾಗಮ ಪರಿಣತರು ಪರಿಚಾರಕವ್ರಾತ ॥
ಬಂದು ದಾಕ್ಷಣ ಸಕಲ ಸಾಧನ ।
ವೃಂದವಾ ಕ್ರತುಶಾಲೆ ಸೊಗಸಾ ।
ಯ್ತೆಂದಿ ನಂಬುಜಗರ್ಭ ನಾರಂಭಿಸಿದ ಮುಖದಂತೆ ॥ ೧೮೩ ॥

ಇದಕ್ಕಾಗಿ ಮಂತ್ರಗಳೂ, ವಿಧಿಯೂ ಇವೆ. ಈ ವಿಧದ ಸಂಸ್ಕಾರಕ್ಕೆ ಅಧಿವಾಸನ ಎಂದು ಹೆಸರು. ಶ್ರುತಿಸಂವಾದ ಪಾರಾಯಣನ-ವೇದಪಠನೆಯಲ್ಲಿ ಆಸಕ್ತನಾಗಿರುವ.

(೧೮೧) ನೃತ್ತಗೀತವಾದ್ಯ, ಈ ಮೂರು ಸೇರಿದರೆ ತೂರ್ಯತ್ರಯವೆಂದು ಸಂಜ್ಞೆ, ಅಮೃತ-ತ್ಸ, ಅನುರ್ದ್ಧ; ತ್ಸ-ಯಜ್ಞ, ದ್ಧ-ಜನ್ಸ; ತ್ಸ-ಮಂಟಪ, ದ್ಧ-ಮಂಡಪ.

(೧೮೨) ಕುಳ್ಳಿರ್ದರ್ ಎಂಬುದು ದಕ್ಷಿಣಮಾರ್ಗದ ಕನ್ನಡ, ಇದಕ್ಕೆ ಉತ್ತರಮಾರ್ಗದಲ್ಲಿ ಕುಳ್ಳಿದರು ಎಂದಾಗಿದೆ.

(೧೮೩) ಅಂಬುಜ-ಕಮಲವು- ಗರ್ಭ-ಗರ್ಭವು ಯಾರಿಗೋ ಅವನು (ಬ್ರಹ್ಮ). ಸಂದಣಿ + ಇಸು-ಸಂದಣಿ ಎಂಬ ಕನ್ನಡ ನಾಮವಾಚಕದಮೇಲೆ ಇಸು ಪ್ರತ್ಯಯವುಸೇರಿ ಹೊಸ ಧಾತುವಾಗಿದೆ.

ಕೇಳಿದೈ ರಘುವಂಶಲಕ್ಷ್ಮೀ।
ಲೋಲಸುತ ಬಳಿಕಾ ಮಹಾಧ್ವರ।
ಶಾಲೆಯಲಿ ವರ ವಾಮದೇವ ವಸಿಷ್ಠ ರುಚಿತದಲಿ ॥
ಬಾಲಶಶಿಧರ ಸನ್ನಿಭನ ಮುನಿ।
ಜಾಲಚಂಡಪ್ರಭನ ಶಾಂತಾ।
ಬಾಲಿಕೆಯ ವಲ್ಲಭನ ಮನ್ನಿಸಿದರು ನಯೋಕ್ತಿಯಲಿ ೧೮೪ ॥

ಎಸೆದುದ ಧ್ವರವೆರಡರ ಭಿಮುಖ।
ವಸತಿಯ ಭಿವಳಯದಲಿ ಸಂಪಾ।
ದಿಸಿದ ಸಕಲ ದ್ರವ್ಯದಲಿ ಮುನಿವರನ ನುಜ್ಞೆಯಲಿ ॥
ಮಿಸುಪ ಕಾಂಚನ ಪಾತ್ರೆಗಳ ಪರಿ।
ವಿಸರ ದಮಳ ಸುವರ್ಣ ಕುಂಭ।
ಪ್ರಸರದಲಿ ತದ್ವಿಧಿ ವಿಹಿತ ಯಜ್ಞೋಪಕರಣದಲಿ ॥ ೧೮೫ ॥

ವರಕುಶ ಸ್ಥಂಡಿಲ ವುಲೂಖಲ।
ಚರು ಪುರೋಡಾಶಾಜ್ಯ ದರ್ಭಾಂ।
ಕುರ ಸುವರ್ಣದ್ರೋಣ ಸೃಕ್ಸ್ರುವ ವ್ರೀಹಿ* ತಿಲಸಾಜ್ಯ ॥
ಬರುಹಿಯಿಧ್ಮ ಸಮಿತ್ಸ್ರುತಾನಾ।
ವರಣಹುತ ಪತ್ರಾದಿ ಮುಖಪರಿ।
ಕರವ ಮೇಳೈಸಿದರು ತತ್ಕ್ರತುಕುಂಡವಲಯದಲಿ ॥ ೧೮೬

ಸುಳಿದು ಬಂದುದು ವಾಜಿ ಭೂಮಂ।
ಡಲವನನುಪಮ ವೈದಿಕೋಕ್ತದ।
ವಿಳಸದಲಿ ನೃಪಪತ್ನಿ ಜಾಗರದಲಿ ಮಹಾಧ್ವರದ ॥

(೧೮೪) ಬಾಲಶಶಿಧರಸನ್ನಿಭನ-ಬಾಲಚಂದ್ರನನ್ನು ತಲೆಯಲ್ಲಿ ಧರಿಸಿದ ಈಶ್ವರನಿಗೆ ಸಮಾನನಾದ; ಮುನಿಜಾಲಚಂಡಪ್ರಭನ-ಋಷಿಗಳಗುಂಪಿಗೆ ಸೂರ್ಯನಂತಿರುವ (ಪ್ರಕಾಶಮಾನನಾದ)

(೧೮೫) ಅಧ್ವರವೆರಡರ-ಅಶ್ವಮೇಧ ಪುತ್ರಕಾಮೇಷ್ಟಿಗಳ.

(೧೮೬) ಪುರೋಡಾಶ-ಯಜ್ಞದಲ್ಲಿ ಕೊಡಲುಕೊಡುವ ಆಹುತಿವಿಶೇಷ, ಅಕ್ಕಿಯಹಿಟ್ಟನಲ್ಲಿ ರೊಟ್ಟಿಯಂತೆಮಾಡಿದ ಪದಾರ್ಥ. ಸೃಕ್, ಸ್ರುವ-ಇವು ಅಗ್ನಿಯಲ್ಲಿ ಹೋಮಮಾಡುವುದಕ್ಕೆ ತುಂಬಿಕೊಳ್ಳುವ ಮರವಸೌಟುಗಳು, ಬರುಹಿ-ಪ್ರಸ್ತ-ಬರ್ಹಿಸ್- ಇದು ಹೋಮಮಾಡುವುದಕ್ಕಾಗಿ ಇರುವ ತುಪ್ಪದಪಾತ್ರೆಯನ್ನು ಇಡುವುದಕ್ಕೆ ಕೆಳಗೆಹಾಸುವ ದರ್ಭೆಗಳಕಟ್ಟು; ಇಧ್ಮ-೨೧ ಸಮಿತ್ತುಗಳನ್ನು ಸೇರಿಸಿರುವ ಕಟ್ಟು. ಸಮಿತ್ಸ್ರುತಾನ-ಹೋಮಮಾಡುವುದಕ್ಕೆ ಯೋಗ್ಯವಾದ ಅರಳಿಯೇ ಮೊದಲಾದ ಕಡ್ಡಿಗಳ ಸಮೂಹ.

ಬಳಿಯಲಿರ್ದಳು ಲಕ್ಷ್ಮಿಲಕ್ಷ್ಮೀ ।
ನಿಳಯುರಮುಲಧ್ಯಾನದಲಿ ವರ ।
ವಿಳಸಿತಾಧ್ವರ ಯೂಪತತಿ ರಂಜಿಸಿದುದಿದಿರಿನಲಿ ॥ ೧೮೭ ॥

ಯೂಪಬದ್ಧ ತುರಂಗ ಪಶು ಮು ।
ಖ್ಯೋಪಪನ್ನ ಸಮಸ್ತ ಪಶು ಸುಮ ।
ದಾಪರಾಗ ಪವಿತ್ರಹುತ ಪರಮಾನ್ನ ಪೃಷದಾಜ್ಯ ॥
ಸೋಪವೀತಾವಿಶಾಕ್ಷೆ ಚರು ಸಮಿ ।
ಧೋಪಚಾರ್ಯಾಗ್ನಿಪ್ರಣೀತಾ ।
ಸ್ಥಾಪಿತಪ್ರಾಗ್ವಂಶದಧ್ವರ ಶಾಲೆ ಚೆಲುವಾಯ್ತು ॥ ೧೮೮ ॥

ಬಳಿಕ ಮಾರ್ಕಂಡೇಯ ಕಾಶ್ಯಪ ।
ಕಲಶಭವ ಚವನಾಂಗಿರಸ ಮುನಿ ।
ತಿಲಕ ಕೌಶಿಕ ಯಾಜ್ಞ್ಯವಲ್ಕ್ಯ ಪ್ರಮುಖಮುನಿಜನವ ॥
ನಿಲಿಸಿದನು ಋತ್ವಿಕ್ಪ್ರಹೋತ ।
ಸ್ಥಳವಿಮಳರುದ್ಗಾತೃಗಳ ಸಂ ।
ಮಿಳಿತಲಲಿತಾಸ್ಥಾನಕದ ಲಜಸೂನು ಹರುಷದಲಿ ॥ ೧೮೯ ॥

ಕರೆದು ಮುನಿಸಾರಂಗ ಶೃಂಗನ ।
ನಿರಿಸಿದನು ಮುನಿ ಪುತ್ರಕಾಮ್ಯಾ ।
ಧ್ವರದ ಬ್ರಹ್ಮತ್ವಕ್ಕೆ ತುರಗಾಧ್ವರಕೆ ತಾನಾದ ॥
ಪರಮಯಜ್ಞವಿಧಾನ ವಿದಿತೋ ।
ತ್ಕರ ಶ್ರುತಿಸ್ಮೃತಿ ಸಂಪ್ರಧಾರಣೆ ।
ಗಿರಿಸಿದನು ಪುಸ್ತಕವನಿತ್ತು ವಶಿಷ್ಠ ನಿಜಸುತನ ॥ ೧೯೦ ॥

(೧೮೭) ಯೂಪತತಿ-ಯಜ್ಞದಲ್ಲಿ ಯಜ್ಞಪಶುವನ್ನು ಕಟ್ಟುವುದಕ್ಕಾಗಿ ನೆಟ್ಟಿರುವ ಕಗ್ಗಲಿ ಮೊದಲಾದ ಮರದಕಂಬಗಳ ಗುಂಪು.

(೧೮೮) ಸುಮದ + ಅಪರಾಗ = ಹೂವಿನಧೂಳಿ; ಪೃಷದಾಜ್ಯ ಪೃಷತ್-ಮೊಸರಿನಿಂದಕೂಡಿದ, ಆಜ್ಯ-ತುಪ್ಪ; ಆವಿಶಾಕ್ಷೆ-ಕಾದಿರುವಹಾಲಿಗೆ ಮೊಸರನ್ನು ಸೇರಿಸುವುದರಿಂದ ಆಗುವ ಗಟ್ಟಿಯಾದ ಭಾಗ; ಪ್ರಾಗ್ವಂಶ-ಹೋಮದ್ರವ್ಯ ಮೊದಲಾದವುಗಳನ್ನು ಇಡುವುದಕ್ಕಾಗಿ ಕಟ್ಟಿರುವ ಕೋಣೆ.

(೧೮೯) ಕಲಶ-ಕುಂಭದಲ್ಲಿ, ಭವ-ಹುಟ್ಟಿದವನು ಕಲಶಭವ (ಅಗಸ್ತ್ಯ), ಋತ್ವಿಕ್-ಯಜ್ಞದಲ್ಲಿ ಹೋಮವನ್ನು ಮಾಡುವುದಕ್ಕಾಗಿ ಗೊತ್ತುಮಾಡಲ್ಪಟ್ಟಿರುವವನು; ಪ್ರಹೋತ-ಋಗ್ವೇದವನ್ನು ಬಲ್ಲ ಋತ್ವಿಕ್ಕು; ಉದ್ಗಾತೃ-ಸಾಮವೇದವನ್ನು ಬಲ್ಲ ಋತ್ವಿಕ್ಕು; ಅಜಸೂನು-ದಶರಥ.

(೧೯೦) ಅನ್ವಯ:-ಮುನಿ (ವಶಿಷ್ಠ) ಮುನಿಸಾರಂಗಶೃಂಗನನು ಕರೆದು ಪುತ್ರಕಾಮ್ಯಾಧ್ವರದ ಬ್ರಹ್ಮತ್ವಕ್ಕೆ ಇರಿಸಿದನು, ತಾನು ತುರಗಾಧ್ವರಕೆ (ಬ್ರಹ್ಮನು)ಆದ. ತ್ರ-ಪುಸ್ತಕ, ಧ್ವ ಹೊತ್ತಗೆ; ಸಾರಂಗಶೃಂಗ-ಋಷ್ಯಶೃಂಗ.

ರಾಜಋಷಿ ಜನಕನನು ಕಾಶೀ ।
ರಾಜನನು ಕೇಕಯ ನೃಪಾಲನ ।
ಯಾಜಮಾನ್ಯದ ಮಾನ್ಯತೆಯಲಾ ಯಜ್ಞ ಶಾಲೆಯಲಿ ॥
ಆ ಜನೇಶ್ವರನಿರಿಸಿ ಮುದದಲಿ ।
ಪೂಜಿಸಿದ ನವರುಗಳ ಬಳಿಕ ಸ ।
ರೋಜಭವನಂಘ್ರಿಯಲಿ ತಾಂ ಚಾಚಿದನುಮಸ್ತಕವ ॥ ೧೯೧ ॥

ಮುನಿ ಸುಪುತ್ರಾವಾಪ್ತಿರಸ್ತೆಂ ।
ದೆನುತ ನೆಗಹಿದನೊಸ*ರ್ವಕರುಣದ ।
ನನೆನಗೆಯ ನಯಸಾರ ವಚನದ ಲರಸನಾ ನನವ ॥
ಜನಪದೀಕ್ಷಿತ ನಾದನಾ ಮುನಿ ।
ವಿನುತ ವಚನದ ಲಾಹವಿರ್ಭೋ ।
ಜನದ ಬರ್ಹಿರ್ಮುಖರು ನೆರೆದರುಬಹಳ ಹರ್ಷದಲಿ ॥ ೧೯೨ ॥

ದ್ಯುಮಣಿಕುಲ ಕೇಳ್ ಚೈತ್ರ ಸಿತಪಂ ।
ಚಮಿಯ ಉತ್ತರ ಪೂರ್ವವೇದಿಯ ।
ಲಮಳ ಪುಣ್ಯಾಹದ ಮಹಾರಚನೆಯನು ವಿಸ್ತರಿಸಿ ॥
ಅಮಳತರ *ಶ್ರುತಿಘೋಷದಲಿ ಭೂ ।
ರಮಣ ನಾಕ್ರತುಯಾಜಮಾನ್ಯಾ ।
ಶ್ರಮವ ಕೈಕೊಂಡೆಸೆದನಾ ಮುನಿಜನರ ಮಧ್ಯದಲಿ ॥ ೧೯೩ ॥

ಹೊದೆದ ಹರಿಣಾಜಿನದ ನವನೀ ।
ತದ ವಿಲೇಪದ ಋಷ್ಯಶೃಂಗನ ।
ವಿದಿತ ಕಳಕಳದಮಳಸೂತ್ರದ ಸಂವಿಧಾನದಲಿ ॥

(೧೯೧) ರಾಜನು ಋಷಿಯಂತೆ-ರಾಜಋಷಿ (ಉ. ಉ. ಕರ್ಮ. ಸ)ಗುಣಸಂಧಿ; ವಿಕಲ್ಪವಾಗಿ 'ಅರ್' ಬರಲಿಲ್ಲ.

(೧೯೨) ಸುಪುತ್ರಾವಾಪ್ತಿರಸ್ತು + ಎಂದು-, ಇಲ್ಲಿ ಸಂಧಿವಿಕಲ್ಪಕ್ಕೆ ೧೬ನೆಯ ಪದ್ಯದ ಟಿಪ್ಪಣಿಯನ್ನು ನೋಡಿ, ನನೆನಗೆ- ಮುಗುಳುನಗೆ, ನಸುನಗೆ- ಇವು ಪರ್ಯಾಯಪದಗಳು.

(೧೯೩) ದ್ಯು-ಆಕಾಶಕ್ಕೆ, ಮಣಿ-ರತ್ನದಂತಿರುವವನು-ದ್ಯುಮಣಿ (ಸೂರ್ಯ) ಉತ್ತರ ಪೂರ್ವವೇದಿಯಲಿ-ಉತ್ತರ, ಪೂರ್ವದಿಕ್ಕಿನಲ್ಲಿಹಾಕಿರುವ ಹಸೆಜಗುಲಿಯಲ್ಲಿ, ಸಿತಪಂಚಮಿ-ಶುಧ್ಧಪಂಚಮಿ.

(೧೯೪) ಈ ಪದ್ಯದಲ್ಲಿ ಕರ್ತೃಪದವಿಲ್ಲದುದರಿಂದ ದಶರಥನು, ಎಂದು ಅಧ್ಯಾಹಾರಮಾಡಿಕೊಳ್ಳಬೇಕು. ಮಖಪುರುಷಪ್ರತಿಷ್ಠಿತವ-ಯಜ್ಞಪುರುಷನ ಆವಾಹನೆಯನ್ನು.

ಉದಿತಮಂಗಳತೂರ್ಯರವದ ।
ಭ್ಯುದಯದಲಿ ವೇದೋಕ್ತವಿಧಿ ಮಾ ।
ರ್ಗದಲಿ ಮಾಡಿದ ನಮಳಮುಖ ಪುರುಷ ಪ್ರತಿಷ್ಠಿತವ ‖ ೧೯೪ ‖

ವಿರಚಿತಾಗಮದಿಂದ ದರ್ಭಾ೦ ।
ಕುರ ಪರಿಸ್ತರಣಾದಿ ಗಂಧೋ ।
ತ್ಕರ ಸುಪುಷ್ಪಾಕ್ಷತೆಗಳಿಂದರ್ಚಿಸಿದನಾ ಶಿಖಿಯ ‖
ಬರುಹಿಯಿಧ್ಮಸ್ರುವಂಗಳಿಂ ಸ ।
ತ್ಕರಿಸಿ ವಿಧಿಪೂರ್ವಕದಿ ಮುಖಬಂ ।
ಧುರದಲಿಂಧನದಿಂದ ಪುಟಗೊಳಿಸಿದನು ಹುತವಹನ ‖ ೧೯೫ ‖

ಸುತ್ತಲಾಹವನೀಯ ಗಾರುಹ ।
ಪತ್ಯ ದಕ್ಷಿಣ ವಹ್ನಿಗಳ ಮುನಿ ।
ಪೋತ್ತಮರು ಬಳಸಿದರು ತತ್ಕ್ರಮಪರಿಕರಂಗಳಲಿ ‖
ಎತ್ತಿದರು ಹಯಮೇಧಮುಖಮೂ ।
ಲೋತ್ಕರದ ಮಂತ್ರಗಳ ವರನಿಗ ।
ಮೋತ್ಕರದ ತತ್ಪೂರ್ವ ಮೀಮಾಂಸಾಪರಿಶ್ರುತದ ‖ ೧೯೬ ‖

ಇದುವೆ ಸಿದ್ಧವಿದಲ್ಲ ನಿಶ್ಚಯ ।
ವಿದು ಶ್ರುತಿ* ಸ್ಮೃತಿಗಳಲಿ ಬಿಡಿ ಸಾ ।
ಕದುವೆ ಸಾಮಾನ್ಯ ಪ್ರಯೋಗವಿದೀಗ ಶಾಸ್ತ್ರದಲಿ ‖
ವಿದಿತ ವಾಕ್ಯಪರಿಗ್ರಹಣ ವಿಂ ।
ತಿದರ ಮೇಲಿಲ್ಲೆಂಬ ಮುನಿತ ।
ರ್ಕದ ಘಡಾವಣೆ ಘಾಡಿಸಿದುದಾಯಜ್ಞ ಮಂಟಪವ ‖ ೧೯೭ ‖

(೧೯೫) ಪರಿಸ್ತರಣ—೧೬ ದರ್ಭೆಗಳನ್ನು ತೆಗೆದುಕೊಂಡು ದರ್ಭೆಯಿಂದ ಸುತ್ತಿ ಮಾಡಿದ ನಾಲ್ಕು ಕಟ್ಟುಗಳನ್ನು ಅಗ್ನಿಕುಂಡದ ನಾಲ್ಕುದಿಕ್ಕುಗಳಲ್ಲಿಯೂ ಇಡುವುದು-ಒಟ್ಟು ೬೪ ದರ್ಭೆಗಳು. ಹುತ-ಹೋಮದ್ರವ್ಯವನ್ನು, ವಹ-ತೆಗೆದುಕೊಳ್ಳತಕ್ಕವನು(ಅಗ್ನಿ)

(೧೯೬) ತ್ರೇತಾಗ್ನಿಗಳು-ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ; ಅಗ್ನಿಗೆ ಆಯಾ ಕರ್ಮಾಂಗವಾಗಿ ಬೇರೆಬೇರೆ ಹೆಸರು ಬರುವುದು. ತತ್ಪೂರ್ವಮೀಮಾಂಸಾಪರಿಶ್ರುತದ-ಪೂರ್ವಮೀಮಾಂಸೆಯಲ್ಲಿ ಪ್ರಸಿದ್ಧವಾಗಿರುವ; ಪೂರ್ವಮೀಮಾಂಸೆಯಲ್ಲಿ ಕರ್ಮವಿಚಾರವನ್ನೂ, ಉತ್ತರಮೀಮಾಂಸೆಯಲ್ಲಿ ಜ್ಞಾನವಿಚಾರವನ್ನೂ ಹೇಳಿದೆ.

(೧೯೭) ವಿದಿತವಾಕ್ಯಪರಿಗ್ರಹಣ-ಪ್ರಸಿದ್ಧವಾದ ವಚನವನ್ನು ಗ್ರಾಹ್ಯಮಾಡಿರುವುದು.

ಬಳಿಕ ನಡೆದುದು ಮಂತ್ರತಂತ್ರಾ ।
ವಳಿಗಳಲಿ ತತ್ಸಾಮಗಾನದ ।
ಕಳಕಳದ ನಿಗಮತ್ರಯಂಗಳ ನಿಶ್ಚಯಂಗಳಲಿ ॥
ವಿಳಸದುದ್ಗಾತೃಗಳ ಮಂತ್ರಾ।
ಕಲಿತ ಹೋತ್ರಧ್ವರ್ಯುರ್ಋತ್ವಿಜ ।
ರುಲುಹು ತಲೆದೂಗಿಸಿತು ನಭದ ಹವಿರ್ಭುಜಾವಳಿಯ ॥ ೧೯೮ ॥

ಕ್ರತುಮುಖಸ್ವಾಹಾಯ ಮಾನಾ ।
ಹುತಿಯ ವೌಷಟ್ಕೃತಿಯ ಸರ್ವಾ ।
ಹುತಿಯ ಸಂರಂಭಾತಿಶಯದಲಿ ತಣಿದರೈ ಸುರರು ॥
ಶತಮಖಾದಿ ಸಮಸ್ತ ದೇವ ।
ಪ್ರತತಿ ತೇಗಿತು ತುಷ್ಟಿಯಲಿ ಭೂ ।
ಪತಿಯ ರಾಜಿತ ವಾಜಿಮೇಧದಲಣುಗ ! ಕೇಳೆಂದ ॥ ೧೯೯ ॥

ಬೀಳುವಾಹುತಿಗಳನು ಸವಿದುರಿ ।
ನಾಲಗೆಗಳುಬ್ಬೆದ್ದು ಕುಣಿದುವು ।
ಮೇಲುಹವಿಗವ್ವಳಿಸಿ ಹರಹಿನಲಗ್ನಿ ಕುಂಡದಲಿ ॥
ಹೇಳಲೇನದ ನಶ್ವಮೇಧದ ।
ಬೇಳುವೆಯ ಸಂಭ್ರಮದ ಧಾಳಾ ।
ಧೂಳಿಯಲಿ ತಿವಿದಾಡಿದುವು ಜಿಹ್ವೆಗಳು ಹುತವಹನ ॥ ೨೦೦ ॥

ಸಿಳಿಸಿಳಿಧ್ವನಿ ಮಸಗಿ ತಿಳ ಹೆ ।
ಕ್ಕಳಿಸಿದುವು ಝುಮ್ಮೆಂದು ಸಮಿಧಾ ।
ವಳಿಗಳಬ್ಬರಿಸಿದುವು ಛಟಛಟ ಛಟನಿನಾದದಲಿ ॥

(೧೯೮) ಅಧ್ವರ್ಯು-ಯಜುರ್ವೇದವನ್ನು ಬಲ್ಲ ಋತ್ವಿಕ್ಕು; ಹವಿಸ್-ಹೋಮದ್ರವ್ಯವನ್ನು ಭುಜ-ಭಕ್ಷಿಸುವವರು-(ದೇವತೆಗಳು)

(೧೯೯) ಯಜ್ಞದಲ್ಲಿ-ಸ್ವಾಹಾ, ವೌಷಟ್ ಮೊದಲಾದ ಶಬ್ದಗಳನ್ನು ಹೋಮಕಾಲದಲ್ಲಿ ಉಪಯೋಗಿಸಬೇಕೆಂಬ ನಿಯಮುಂಟು. ಶತ-ನೂರು, ಮಖ-ಯಜ್ಞಗಳನ್ನು ಮಾಡಿದವನು-ಶತಮಖ (ಇಂದ್ರ).

(೨೦೦) ಉರಿಯೇ-ನಾಲಗೆಗಳು- ಉರಿನಾಲಗೆಗಳು (ಅವ. ಪೂರ್ವ. ಕ) ಅಗ್ನಿ-ತ್ಸ, ಅಗ್ಗಿ-ದ್ಭ; ಕುಂಡ-ತ್ಸ, ಕೊಂಡ-ದ್ಭ; ಅಗ್ನಿಯ ಜಿಹ್ವೆಗಳು (೭)-ಹಿರಣ್ಯಾ, ಕನಕಾ, ರಕ್ತಾ, ಕೃಷ್ಣಾ, ಸುಪ್ರಭಾ, ಅತಿರಿಕ್ತಾ, ಬಹೂರೂಪಾ.

ಲಲಿತಘೃತಸಮ್ಮಿಳಿತ ಚರು ಪುಟ ।
ಗೊಳಿಸಿದುದು ಪಶುಹವಿಗೆ ಭುಗಿಲೆಂ ।
ದುಲಿದು ಸವಿದಾಡಿದನು ಹುತವಹನಶ್ವಮೇಧದಲಿ ॥ ೨೦೧ ॥

ತಳಿತುದೋ ಪರಿಮಿಳಿತ ಧೂಮಾ ।
ವಳಿ ವಿಯದ್ಭಾಗದಲಿ ಸುರಸಭೆ ।
ಗಳಲಿ ಸರಸಿಜಸಂಭವನ ಪಟ್ಟಣದಲಾಧ್ರುವನ ॥
ನಿಳಯದಲಿ ಲಂಬಿಸಿತು ಸುಧೆಯುಲಿ ।
ಹೊಳಕೆ ಕೆಟ್ಟಿತು ಸುರಕುಜದ ಹಂ ।
ಬಲನು ಬಿಡಿಸಿತು ಸುರಪಶುವನೇಳಿಸಿತು ನಾಕದಲಿ ॥ ೨೦೨ ॥

ಕುಶನೆ ಕೇಳೈ ದಣಿದುದಮರ ।
ಪ್ರಸರವಲ್ಲಿ ಸಮಸ್ತ ಭೂಸುರ ।
ವಿಸರವಿಲ್ಲಿ ಸುಭೋಜನಂಗಳ ಲಧಿಕದಾನದಲಿ ॥
ಕುಶನನುಜ ! ಕೇಳ್ ಸಕಲಜನ ಹರು ।
ಷಿಸಿತು ಹಯಮೇಧದಲಿ ನಡೆದುದು ।
ವಸುಧೆಗಚ್ಚರಿಯೆನಲು ಮಖ ದಶರಥ ಮಹೀಪತಿಯ ॥ ೨೦೩ ॥

ಶ್ರುತಿಯ ಪೂರ್ವೋತ್ತರ ರಹಸ್ಯ ।
ಸ್ಮೃತಿ ಸುಮಾರ್ಗದ ತರ್ಕಶಾಸ್ತ್ರದ ।
ವಿತತ ವಿಮಳಧ್ಯಾನ ಜಡಿದುದು ಮುನಿಸದಸ್ಯರಲಿ ॥
ಶ್ರುತಿ ಸುವಾಕ್ಯವಿನೋದ ಪದ ಪ ।
ದ್ಧತಿ ಸುನರ್ತನವಾದ್ಯಗೀತಾ ।
ಮೃತಲಹರಿ ಸುಳಿಸುಳಿದುದಾಚೆಯ ಲರಸುಹಂತಿಯಲಿ ॥ ೨೦೪ ॥

(೨೦೧) ಲಲಿತಘೃತಸಮ್ಮಿಳಿತಚರು-ಎಳ್ಳು ತುಪ್ಪದಿಂದ ಕೂಡಿದ ಅನ್ನ; ಹೋಮಕ್ಕೆ ಉಪಯೋಗಿಸುವ ಅನ್ನಕ್ಕೆ ಚರುವೆಂದು ಸಂಜ್ಞೆ. ತಿಳ=ಎಳ್ಳು.

(೨೦೨) ತಳಿರ್ + ತು = ತಳಿರ್ತು ಎಂಬ ರೂಪವು ಉತ್ತರಮಾರ್ಗದಲ್ಲಿ ರೇಫೆ ಲೋಪವಾದುದರಿಂದ ತಳಿತು ಎಂದಾಗಿದೆ. ಸುಧೆಯುಲಿ ಹೊಳಕೆಕೆಟ್ಟಿತು ದೇವತೆಗಳಿಗೆ ಅಮೃತದಲ್ಲಿ ರುಚಿ ತಪ್ಪಿತು. ಸುರಪಶು-ದೇವತೆಗಳ ಹಸು (ಕಾಮಧೇನು). ಕು-ಭೂಮಿಯಲ್ಲಿ, ಜ-ಹುಟ್ಟಿದುದು ಕುಜ (ಮರ).

(೨೦೩) ಜನಶಬ್ದವು ನಪುಂಸಕಲಿಂಗವಾದುದರಿಂದ ಹರುಷಿಸಿತು ಎಂಬ ನಪುಂಸಕಲಿಂಗದ ಕ್ರಿಯೆ ಬಂದಿರುವುದು.

(೨೦೪) ಮುನಿಗಳಾದ ಸದಸ್ಯರು-ಮುನಿಸದಸ್ಯರು (ವಿ. ಪೂರ್ವ. ಕ) ಶ್ರುತಿಸುವಾಕ್ಯವಿನೋದ-ಕಿವಿಗಿಂಪಾದ ಮಾತುಗಳನ್ನಾಡುವುದರಿಂದಾಗುವ ಹರ್ಷ.

ಆದುದೀಪರಿ ಸಕಲ ಸೌರಂ ।
ಭಾದಿ ವೈಭವದಿಂದಲಾ ಸುಕೃ ।
ತೋದಯನ ಹಯಸಪ್ತತಂತು ನಿರಂತರಾಯದಲಿ ॥
ಆದುದಾ ಕಾಮ್ಯಾಧ್ವರವು ಬಳಿ ।
ಕಾ ದಯಾಂಬುಧಿ ಮುನಿವಿಭಾಂಡ ತ ।
ನೂದಯನ ಮಂತ್ರಾಭಿಪೂರಿತ ವಿಹಿತ ಸಾಂಗದಲಿ ॥ ೨೦೫ ॥

ಕ್ಷಿತಿಸುತಾಸುತ ಕೇಳು ಪೂರ್ಣಾ ।
ಹುತಿಯ ಸಮನಂತರದಲಾ ರವಿ ।
ಶತ ಸುತೇಜೋಮೂರ್ತಿ ಹೊಳೆದುದು ಯಜ್ಞಕುಂಡದಲಿ ॥
ಶತಮುಖ ಪ್ರಮುಖಾದಿ ದೇವ ।
ಪ್ರತತಿಗಳ ಬಿನ್ನಹದಿ ಲಕ್ಷ್ಮೀ ।
ಪತಿಯುವೊಲು ವೈದೋರಿತಾಹವನೀಯ ಮಧ್ಯದಲಿ ॥ ೨೦೬ ॥

ಮಿಸುಪ ಕಾಂಚನ ಪಾತ್ರೆಯಲಿ ಪೂ ।
ರಿಸಿದ ಪರಮಾನ್ನವನು ಬೊಮ್ಮದ ।
ರಸದ ಪರಿಪೂರ್ಣವನು ಸತ್ತ್ವರಜಸ್ತಮೋಗುಣದ ॥
ಎಸಕದಭಿಗತ ಪೂರ್ಣವನು ಸುಮ ।
ನಸರು ಜಯಜಯವೆನಲು ಕರಯುಗ ।
ಬಿಸರುಹದಿನೊಲಿದಿತ್ತುದಾ ನಿಜಮೂರ್ತಿ ದಶರಥಗೆ ॥ ೨೦೭ ॥

ಮೊರೆದುವಮರರ ಭೇರಿ ಸುಮನಸ ।
ತರುಣಿಯರ ಕೈಯಿಂದ ಕುಸುಮೋ ।
ತ್ಕರ ಕದಂಬಕ ಸೂಸಿದವು ಶಿರದಲಿ ಮಹೀಪತಿಯ ॥

(೨೦೫) ಸಕಲ ಸೌರಾಭಾದಿ ವೈಭವದಿಂದಲಿ-ಉತ್ಸಾಹವೇ ಮೊದಲಾದ ಎಲ್ಲಸಂಭ್ರಮಗಳಿಂದ; ಸುಕೃತದ ಉದಯವು (ಅಭಿವೃದ್ಧಿ) ಯಾರಿಗೋ ಅವನು-ಸುಕೃತೋದಯ (ಬ. ವ್ರೀ.); ಸಪ್ತ-ಏಳು ಮಾತ್ರೆಗಳು ಅಥವಾ ಅಗ್ನಿಯ ಏಳು ನಾಲಗೆಗಳಿಂದ, ತಂತು-ವಿಸ್ತರಿಸಲ್ಪಡುವುದು (ಮಾಡು ವುದು)-ಸಪ್ತತಂತು-(ಯಜ್ಞ); ನಿರಂತರಾಯ-ವಿಘ್ನವಿಲ್ಲದುದು.

(೨೦೬) ಪೂರ್ಣಾಹುತಿ-ಹೋಮಗಳೆಲ್ಲವೂ ಮುಗಿದಮೇಲೆ ಕೊನೆಯಲ್ಲಿ ಮಾಡುವ ಹೋಮ; ತೇಜೋಮೂರ್ತಿ-ಕಾಂತಿಯಿಂದಾದ ದೇಹ; ವೈಯು+ತೋರು-ವೈದೋರು (ಕ್ರಿ. ಸ.).

(೨೦೭) ಮಿಸುಪ-ಪ್ರಕಾಶಿಸುವ; ಬೊಮ್ಮದ ರಸದ-ಪರಮಾತ್ಮತೇಜಸ್ಸಿನ; ಸತ್ತ್ವ……… ಪೂರ್ಣವನು-ಗುಣತ್ರಯಗಳ ಕಾರ್ಯಶಕ್ತಿಯಿಂದ ತುಂಬಿದ.

ಸುರಮುನಿಗಳುರೆ ಘೋಷಿಸಿದರು ।
ಪ್ಪರದ ಗುಡಿ ನೆಗಹಿದವು ನಗರಾಂ ।
ತರದಲೇನು ಕೃತಾರ್ಥನೋ ದಶರಥಮಹೀಪಾಲ ॥ ೨೦೮ ॥

ಅಡಗಿತಾ ವರಮೂರ್ತಿ ಕುಂಡದ ।
ನಡುವೆ ಬಳಿಕ ಮಹೀಶ ರೋಮದ ।
ಗುಡಿಯ ಪುತ್ರ ಫಲೋದಯದ ಪರಿತೋಷದುಬ್ಬಿನಲಿ ॥
ಮಡದಿಯರು ಮೂವರಿಗೆ ಮುನಿಕುಲ ।
ಮೃಡ ವಸಿಷ್ಠನ ನೇಮದಲಿ ವಿಂ ।
ಗಡಿಸಿ ಕೊಟ್ಟನು ನೃಪತಿ ಪರಮೋದನವನುಚಿತದಲಿ ॥ ೨೦೯ ॥

ತರುಣ ಕೇಳೈ ಭಾಗ ನಾಲ್ಕರ ।
ಲೆರಡು ಭಾಗಂಗಳು ಸುಮಿತ್ರಾ ।
ತರುಣಿಗಾದುವು ಸೇರಿದುವು ಪೂರ್ವಾಂಶ ಭಾಗಗಳು ॥
ಹಿರಿಯರಸಿ ಕಿರಿಯರಸಿಯವರಿ ।
ಬ್ಬರಿಗೆ ಮೂವರಿಗಿಂತು ನಾಲ್ಕರ ।
ಪರಿಗಣಿತ ಪರಮಾನ್ನ ಸಂಘಟಿಸಿದುದು ಭಾಗೆಯಲಿ ॥ ೨೧೦ ॥

ನೆನಹು ನಿರ್ವಿಘ್ನದಲಿ ನಡೆದುದು ।
ಮುನಿ ವಸಿಷ್ಠನ ಕರುಣದಲಿ ಬಳಿ ।
ಕನುಪಮಾಧ್ವರದವಭೃಥ ಸ್ನಾನಾವಸಾನದಲಿ ॥
ಮುನಿಗಳಿಗೆ ವಿಪ್ರರಿಗೆ ವಿದ್ವ ।
ಜ್ಜನಕೆ ವಿವಿಧಾಚಾರ್ಯ ಯಾಚಕ ।
ಜನಕೆ ಬೇಡಿದ ಧನವನಿತ್ತನು ತಣಿಯೆ ಧರಣೀಶ ॥ ೨೧೧ ॥

(೨೦೮) ಸುಮನಸ-ದೇವತೆ; ಉತ್ಕರ-ಅಧಿಕ್ಯ; ಕದಂಬಕ-ಸಮೂಹ.

(೨೦೯) ಉಪ್ಪರದ-ಹೆಚ್ಚಾದ; ಗುಡಿ-ಧ್ವಜ; ನೆಗಹಿದುವು-ಎತ್ತಲ್ಪಟ್ಟುವು; ರೋಮದ ಗುಡಿ-ರೋಮಾಂಚರೂಪವಾದ ಧ್ವಜ (ಧ್ವಜಗಳನ್ನು ಎತ್ತಿದಂತೆ ರೋಮಾಂಚವು ಗುಂಪಾಗಿ ಎದ್ದಿತೆಂದು ಭಾವವು); ಮುನಿಕುಲಮೃಡ-ಋಷಿಗಳ ಗುಂಪಿಗೆ ಈಶ್ವರನಂತಿರುವ; ಪರಮೋದನ-ಪರಮಾನ್ನ.

(೨೧೦) ಹಿರಿಯರಸಿ-ಕೌಸಲ್ಯೆ; ಕಿರಿಯರಸಿ-ಕೈಕೆಯಿ; ನಾಲ್ಕರ ಪರಿಗಣಿತ-ಎಣಿಸಿ ನಾಲ್ಕು ಭಾಗಮಾಡಿದ, ಭಾಗೆಯಲಿ ವಿಭಾಗಿಸಿ ಕೊಟ್ಟುದರಲ್ಲಿ.

(೨೧೧) ನೆನಹು (ದಶರಥನ) ಇಷ್ಟಾರ್ಥಸಿದ್ಧಿಯು; ಅಧ್ವರದ-ಯಜ್ಞದ; ವಿದ್ವತ್ + ಜನ-ವಿದ್ವಜ್ಜನ (ಶ್ಚುತ್ವ.) ತಣಿಯೆ-ತೃಪ್ತಿಯಾಗುವಂತೆ.

ತಣಿದುದಖಿಲ ಸುವರ್ಣಮಣಿ ಭೂ ।
ಷಣ ಸುಕನ್ಯಾ ಧೇನು ಹಯ ವಾ ।
ರಣ ವರಾಂಬರ ವಿವಿಧ ವಸ್ತು ವ್ರಜದ ದಾನದಲಿ ॥
ತಣಿಯದಾದುದು ಚಿತ್ತವಾ ದಿನ ।
ಮಣಿಕುಲೇಂದ್ರಂಗಮಮ ಘನ ವಿತ ।
ರಣದ ಶಕ್ತಿಯದೆಂತೊ ಸೀತಾಸೂನು ಕೇಳೆಂದ ॥ ೨೧೨ ॥

ಅರಸ ನಿಖಿಳ ದಿಗಂತದವನೀ ।
ಶ್ವರರನವರವರುಚಿತ ಮಾನ್ಯದ ।
ಪರಿವಿಡಿಯಲುಡುಗೊರೆಗಳಲಿ ವಿವಿಧೋಪಚಾರದಲಿ ॥
ಹಿರಿದು ಮನ್ನಿಸಿ ಕಳುಹಿದನು ಸ ।
ತ್ಕರಿಸಿದನು ಪುರಜನವ ಸಮನಂ ।
ತರದಲೋಕುಳಿಯಾಯ್ತು ನೃಪಕುಲ ಸಾರ್ವಭೌಮಂಗೆ ॥ ೨೧೩ ॥

ಬಳಿಕ ಕನ್ನಡಿ ಕಲಶ ನೃತ್ಯದ ।
ಲಲನೆಯರ ಮಾಂಗಲ್ಯ ವಾದ್ಯದ ।
ಲಲಿತ ಘೋಷದ ಲಾಜೆ ದಧಿ ದೂರ್ವಾಕ್ಷತಾವಳಿಯ ॥
ವಿಲಸದಲಿ ವೈಭವದ ಕಂಚುಕಿ ।
ಗಳ ಗಡಾವಣಿಗಳಲಿ ರಾಜಾ ।
ವಳಿ ಶಿರೋಮಣಿ ಹೊಕ್ಕನನುಪಮ ರಾಜಮಂದಿರವ ॥ ೨೧೪ ॥



## ಎಂಟನೆಯ ಸಂಧಿ.

**ಸೂಚನೆ॥** ರಾಜರಾಜಾಧೀಶನನುಪಮ ।
ರಾಜ ಪರಮೇಶ್ವರನು ಮನುಕ್ಷಿತಿ ।
ರಾಜ ದಶರಥರಾಯ ಪಡೆದನು ಸುತ ಚತುಷ್ಟಯವ ॥

(೨೧೨) ವಾರಣ-ಆನೆ; ವ್ರಜ-ಸಮೂಹ; ದಿನ-ಹಗಲಿಗೆ, ಮಣಿ-ರತ್ನದಂತಿರುವವನು-ದಿನಮಣಿ (ಸೂರ್ಯ); ವಿತರಣ-ದಾನಗುಣ; ಸೂನು-ಮಗ.

(೨೧೩) ಉಚಿತಮಾನ್ಯದ-ತಕ್ಕ ಮರ್ಯಾದೆಗಳ; ಪರಿವಿಡಿಯಲಿ-ಕ್ರಮವಾಗಿ; ಉಡುವ + ಕೊರೆ (ವಸ್ತ್ರ)-ಉಡುಗೊರೆ (ಗಮಕ.)

(೨೧೪) ಲಾಜೆ-ಬತ್ತದ ಅರಳು; ದಧಿ-ಮೊಸರು; ದೂರ್ವಾ-ಗರಿಕೆಯ ಹುಲ್ಲು; ಗಡಾವಣೆ-ಕೂಗಾಟ.

ಸೂಚನೆ:-ರಾಜಪರಮೇಶ್ವರನು-ದೊರೆಗಳಲ್ಲಿ ಈಶ್ವರನಂತಿರುವವನು; ಕ್ಷಿತಿ-ಭೂಮಿಗೆ (ಭೂಮಂಡಲಕ್ಕೆಲ್ಲ), ರಾಜ-ದೊರೆ (ಚಕ್ರವರ್ತಿ); ಸುತರ + ಚತುಷ್ಟಯ (ನಾಲ್ಕು) (ಷ. ತ.)

ಪಿಂಡ ಬಲಿದುದು ಬಳಿಕ ಮೂವರು ।
ಹೆಂಡರಿಗೆ ಕುಶ ಕೇಳ್ ನಿಧಾನವ ।
ಕಂಡ ಕಡು ದಾರಿದ್ರನುತ್ಸವದಂತೆ ಕೋಸಲದ ॥
ಮಂಡಲೇಶ್ವರನಿರಲು ಬಳಿಕಲ ।
ಖಂಡ ಚಿನುಮಯನಾದಿ ಲಕ್ಷ್ಮೀ ।
ಗಂಡನೆಸೆದನು ಕೇಳು ಲವ ಕೌಸಲೆಯ ಗರ್ಭದಲಿ ॥ ೨೧೫ ॥

ತೋರಿದುವು ಗರ್ಭಗಳು ಸೂತ್ರದ ।
ತೋರಿಕೆಯ ಮೌಕ್ತಿಕದವೋಲ್ ವೈ ।
ದೋರಿದುವು ಚಿಹ್ನಂಗಳಂಗದಲಂಗನಾತ್ರಯದ ॥
ಹೇರಿದುವು ಹರುಷವನು ತನು ನಗೆ ।
ದೋರಿದುವು ಮುಖಕಮಲ ಕಾಂತಿಯ ।
ಬೀರಿದುವು ಭುಜಲತೆಗಳಭಿನವ ಗರ್ಭದೇಳ್ಗೆಯಲಿ ॥ ೨೧೬ ॥

ನಡು ಪೊದಳ್ದುದು ವರ ವಳಿತ್ರಯ ।
ವಡಗಿದುದು ನಿಜರೋಮರಾಜಿಗ ।
ಳಡರಿದುವು ವೈದೋರಿದುದು ಹೃತ್ತಿಮಿರ ತವಕದಲಿ ॥
*
ಪೊಡರ್ವ ಪೀನ ಪಯೋಧರದ ತುದಿ ।
ಗಡೆಯಲುಕ್ಕಿಡಿಸಿದುದು ರತಿ ಬೆ ।
ಳ್ಪಡರಿದುವು ಮುಖಮಂಡಲಗಳಾ ಮಾನಿನೀತ್ರಯದ ॥ ೨೧೭ ॥

ತುಂಬಿದುವು ನವಮಾಸ ಬಳಿಕ ನಿ ।
ತಂಬಿನಿಯರಿಗೆ ನಿರ್ಮಳಪ್ರತಿ ।
ಬಿಂಬ ಕಾಣಿಸಿತಾದಿ ನಾರಾಯಣನ ಮೂರುತಿಯ ॥

(೨೧೫) ನಿಧಾನ-ನಿಧಿ (ಹೂಳಿಟ್ಟ ಹಣ); ಅಖಂಡ-ಭೇದಿಸುವುದಕ್ಕಾಗದ, ಚಿನುಮಯಸುಜ್ಞಾನಸ್ವರೂಪನು (ವಿಷ್ಣು).

(೨೧೬) ಗರ್ಭಗಳು...ಕದವೋಲ್ ತೋರಿದುವು ಅಂಗನಾತ್ರಯದ ಅಂಗದಲಿ ಚಿಹ್ನಂಗಳ್ ವೈದೋರಿದುವು ತನು ಹರ್ಷವನು ಹೇರಿದುವು ಮುಖಕಮಲ ನಗೆ ದೋರಿದುವು ಭುಜಲತೆಗಳ್ ಕಾಂತಿಯ ಬೀರಿದುವು ಎಂದನ್ವಯ ; ತೋರಿಕೆಯ-ದಪ್ಪವಾದ.

(೨೧೭) ಪೊದಳ್ದುದು-ದಪ್ಪವಾಯ್ತು ; ವಳಿತ್ರಯ-ಹೊಟ್ಟೆಯಮೇಲಿರುವ ಮೂರುಪದರಗಳು ; ಹೃತ್ತಿಮಿರ-ಮನಸ್ಸಿನ ಕತ್ತಲೆ (ಅಜ್ಞಾನ) ; ಪೊಡರ್ವ-ಉಬ್ಬುವ, ಪೀನ-ದಪ್ಪವಾದ, ಉಕ್ಕಿಡಿಸು-ಹೆಚ್ಚು.

ಅಂಬುಜಾನನೆ ಕೌಸಲೆಯ ಗ ।
ರ್ಭಾಂಬುನಿಧಿಯಲ್ಲಖಿಳ ಸುರರ ಕ ।
ದಂಬ ಬಂದೋಲಗಿಸುತಿರ್ದುದು ದಿವಸ ದಿವಸದಲಿ ॥ ೨೧೮ ॥

ಕಂತು ಸನ್ನಿಭ ಕೇಳು ಮೂವರು ।
ಕಾಂತೆಯರಿಗಾದುದು ಕಣಾ ಸೀ ।
ಮಂತಸೌರಂಭಾತಿಶಯದುಬ್ಬರದ ವಿಭವದಲಿ ॥
ಅಂತರಹಿತನನಪ್ರಮೇಯನ ।
ನಂತ ಗುಣಗಣ ನಿಲಯ ಲಕ್ಷ್ಮೀ ।
ಕಾಂತನಾ ನೃಪಗೊಲಿದುದಕೆ ಬೆರಗಾದನಬ್ಜಭವ ॥ ೨೧೯ ॥

ತರಣಿಯೇಕಾದಶದ ದಾನವ ।
ಗುರು ನಿರೀಕ್ಷೆಯಲಿಂದುವಿನ ಶುಭ ।
ಕರದ ದೃಷ್ಟಿಯಲಾಂಗಿರಸ ಸೌಮ್ಯರ ಸುಕೇಂದ್ರದಲಿ ॥
ಪರಮ ಚೈತ್ರದ ಶುದ್ಧ ನವಮಿಯ ।
ವರ ಪುನರ್ವಸು ತಾರೆಯಲಿ ಹರಿ ।
ಯರಸಿ ಬೆಸಲಾದಳು ಭವ ಸ್ಥಿತಿ ಲಯ ವಿವರ್ಜಿತನ ॥ ೨೨೦ ॥

ಮರುದಿವಸ ಪುಷ್ಯದಲಿ ಕೈಕಾ ।
ತರುಣಿ ಪಡೆದಳು ವಿಮಲ ವಿಶ್ವಂ ।
ಭರನ ಶಕ್ತಿತ್ರಯದೊಳೊಂದನು ಶುಭ ಮುಹೂರ್ತದಲಿ ॥
ತರುಣಿ ಕೇಳುಳಿದಂಶವೆರಡನು ।
ನಿರತಿಶಯ ಲಗ್ನದಲಿ ಮಗಧೇ ।
ಶ್ವರನ ಸುತೆ ಪಡೆದಳು ಮಖಾನಕ್ಷತ್ರದುದಯದಲಿ ॥ ೨೨೧ ॥

(೨೧೮) ನಿತಂಬಿನಿಯರಿಗೆ-ಸ್ತ್ರೀಯರಿಗೆ; ಅದಿ......ಮೂರುಶಿಯ ನಿರ್ಮಳ ಪ್ರತಿಬಿಂಬ ಅಂಬುಜಾನನೆ.......ನಿಧಿಯಲ್ಲಿ, ಕಾಣಿಸಿತು-ಸೇರಿ ತೋರಿಬಂದಿತು ; ಕದಂಬ-ಸಮೂಹ.

(೨೧೯) ಕಂತುಸನ್ನಿಭ-ಮನ್ಮಥನಿಗೆ ಸಮಾನನಾದ (ಕುಶನೇ ?); ಕಣಾ-ಅಲ್ಲವೇ? ; ಅಪ್ರಮೇಯನು-ಪ್ರಮಾಣಕ್ಕೆ ಸಿಕ್ಕದವನು.

(೨೨೦) ತರಣಿಯೇಕಾದಶದ-ಲಗ್ನಕ್ಕೆ ಹನ್ನೊಂದನೆಯ ಕಡೆಯಲ್ಲಿ ಸೂರ್ಯನಿರುವಾಗ; ದಾನವಗುರು-ಶುಕ್ರ ; ನಿರೀಕ್ಷೆಯಲಿ-ದೃಷ್ಟಿಯಿರುವಾಗ, ಆಂಗಿರಸ-ಬೃಹಸ್ಪತಿ, ಸೌಮ್ಯ-ಸೋಮನ (ಚಂದ್ರನ), ಮಗ (ಬುಧ); ಕೇಂದ್ರ-ಲಗ್ನಕ್ಕೆ ೪,೭,೧೦ ಈ ಸ್ಥಾನಗಳು ; ಬೆಸಲಾದಳು-ಹೆತ್ತಳು; ಭವ.........ತನ-ಉತ್ಪತ್ತಿ ಸ್ಥಿತಿ ನಾಶಗಳಿಲ್ಲದವನನ್ನು (ವಿಷ್ಣುವನ್ನು).

(೨೨೧) ವಿಶ್ವ-ಪ್ರಪಂಚವನ್ನು, ಭರ-ಧರಿಸಿರುವವನು. ವಿಶ್ವಂಭರ (ವಿಷ್ಣು); ಶಕ್ತಿತ್ರಯ ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ-ಈ ಮೂರು; ಮಗಧೇಶ್ವರನ ಸುತೆ- ಸುಮಿತ್ರೆ.

ಭೋರನಬ್ಬರಿಸಿದುವು ದಿವಿಜರ ।
ಭೇರಿಗಳು ದಿವದವನಿಯರಸುಗ ।
ಳೂರೊಳಗೆ ಗುಡಿ ಕಟ್ಟಿದುವು ಕುಡಿಯಿಟ್ಟ ಹರುಷದಲಿ ॥
ವೀರ ದಶರಥ ಸಾರ್ವಭೌಮನ ।
ಸಾರ ಸಂತೋಷಾಂಬುನಿಧಿ ಮಿಗೆ ।
ಮೇರೆದಪ್ಪಿದುದಾದಿನಾರಾಯಣನ ಜನನದಲಿ ॥ ೨೨೨ ॥

ಆದುದವರಿಗೆ ಬಳಿಕ ಲೌಕಿಕ ।
ವೈದಿಕದ ವೈಭವಗಳಲಿ ಭ ।
ದ್ರೋದಯದ ಭವಕರ್ಮವಾಚಕ ಕರ್ಮದೂರರಿಗೆ ॥
ಮೇದಿನೀಸುರ ಮುಖ್ಯ ನಾನಾ ।
ಮೇದಿನಿಯ ಯಾಚಕರು ಸಿರಿಯನು ।
ಸಾಧಿಸಿದರಾ ಸಾರ್ವಭೌಮನ ಬಹಳ ದಾನದಲಿ ॥ ೨೨೩ ॥

ದಿವಸ ಹನ್ನೆರಡರಲಿ ಮಹದು ।
ತ್ಸವದಲಾದುವು ನಾಮಕರಣ ।
ಪ್ರವರವಾ ನಾಲ್ವರಿಗೆ ಗುಣ ನಾಮಂಗಳಲಿ ಬಳಿಕ ॥
ಅವನಿಜಾಸುತ ಕೇಳಿದೈ ನಿ ।
ಮ್ಮವನಿಜೆಯ ರಮಣಂಗೆ ರಾಮಾ ।
ಖ್ಯವನು ವಿಸ್ತರಿಸಿದರು ವೈದಿಕ ಕರ್ಮ ವಿಹಿತದಲಿ ॥ ೨೨೪ ॥

ಭರತ ಲಕ್ಷ್ಮಣದೇವ ಸಮನಂ ।
ತರದಿ ಶತ್ರುಘ್ನಾಖ್ಯವನು ವಿ ।
ಸ್ತರಿಸಿದರು ಮಿಕ್ಕಾದ ಮೂವರು ರಾಜಪುತ್ರರಿಗೆ ॥

(೨೨೨) ಕುಡಿಯಿಟ್ಟ-ಹೆಚ್ಚಾದ, ದಿವದ ಅವನಿಯ ಅರಸುಗಳ-ಸ್ವರ್ಗದ ದೊರೆಯಾದ ಇಂದ್ರನ, ಭೂಲೋಕದ ರಾಜರ, ಗುಡಿ-ಧ್ವಜ.

(೨೨೩) ಭದ್ರೋದಯದ-ಮಂಗಳಕರವಾದ, ಭವಕರ್ಮವಾಚಕ-ಜಾತಕರ್ಮವೆಂಬ ಹೆಸರು (ಪ್ರಸಿದ್ಧಿಯು), ಮೇದಿನೀ-ಭೂಮಿಯ, ಸುರ-ದೇವತೆ (ಬ್ರಾಹ್ಮಣ), ಕರ್ಮಬದ್ಧರಲ್ಲದಿದ್ದರೂ ಸಾಮಾನ್ಯರಿಗೆ ಅವರು ಹುಟ್ಟಿದರೆಂಬ ಭಾವನೆಯುಂಟಾಗಿತ್ತೆಂಬ ಭಾವವು.

(೨೨೪) ಪ್ರವರ-ಶ್ರೇಷ್ಠ, ಗುಣನಾಮಂಗಳಲಿ- ಅನ್ವರ್ಥನಾಮವನ್ನಿಡುವುದರ ಮೂಲಕ, ರಾಮಾಖ್ಯವನು-ಎಲ್ಲಯೋಗಿಗಳೂ ತನ್ನಲ್ಲಿ ಕ್ರೀಡಿಸುವವನಾದುದರಿಂದ ರಾಮ ಎಂಬ ಹೆಸರನ್ನು.

ಭರಿತ ಭೋಜನ ದಕ್ಷಿಣೆಯಲಾ ।
ದರಿಸಿದನು ಗುರು ಬಂಧುಜನ ಭೂ ।
ಸುರರ ವಿಟ ಶೂದ್ರಾದಿಗಳನುಚಿತದಲಿ ಭೂಪಾಲ ॥ ೨೨೫ ॥

ಐಸೆ ಮತ್ತೇನೆಲೆ ತಪೋಲ ।
ಕ್ಷ್ಮೀಶ ಕೇಳೀ ರಾಮನಾ ಸ ।
ರ್ವೇಶನೆಂದೇ ನೇಮಿಸಿದೆ ನಮಗಾ ಮಹಾತ್ಮಂಗೆ ॥
ಈಸು ನಿರ್ಬಂಧದಲಿ ಗರ್ಭಾ ।
ವಾಸದೊಳಗಿದ್ದುದಿಸಲೇಕೇ ।
ಯಾಸರಿನ ಭವವೇಕೆನುತ ನುಡಿದರು ವರ ಕುಮಾರಕರು ॥ ೨೨೬ ॥

ನೀವು ಕೇಳುವ ಕೃತವಿವೇಕದ ।
ಠಾವು ತಾನದು ಲೇಸು ಜಗದ ಮ ।
ಹಾ ವಿಭುವಲಾ ವಿಷ್ಣು ವಿಶ್ವವ್ಯಾಪ್ತನಾತಂಗೆ ॥
ಈ ವಿಶೇಷ ವ್ಯವಹರಣೆ ಲೋ ।
ಕಾವಳಿಯ ಸುಜನರನು ಸಂ ।
ಭಾವನೋಚಿತದಿಂದ ಸಲಹಲಿಕಾಯ್ತಲೇ ಎಂದ ॥ ೨೨೭ ॥

ಸುಜನರುಪಹತಿಗೊಡಬಡನು ನಾ ।
ಕಜರ ನಷ್ಟವ ಸೈರಿಸನು ಗೋ ।
ದ್ವಿಜ ಮಹಾಮಖ ಹವ್ಯಕವ್ಯಾದಿಗಳ ವರ್ತನೆಯ ॥
ತ್ಯಜಿಸಲೀಸನಿದೀಗ ಗರುಡ ।
ಧ್ವಜನ ಬಿರುದದರಿಂದ ದುಷ್ಟ ।
ಪ್ರಜೆಯ ಶಿಕ್ಷೆಗೆ ಸುಳಿದನಲ್ಲದೆ ಜನ್ಮವಿಲ್ಲೆಂದ ॥ ೨೨೮ ॥

(೨೨೫) ವಿಟ-ವೈಶ್ಯ, ವಿಟ್-ತ್ರ., ವಿಟ-ದ್ಧ.

(೨೨೬) ಐಸೆ-ಅಲ್ಲವೆ, ತಪೋಲಕ್ಷ್ಮೀಶ-ತಪವೆಂಬ ಲಕ್ಷ್ಮಿಯ ಪತಿ (ಋಷಿ), ಈಸು-ಇಷ್ಟು, ಆಸರಿನ-ಕಷ್ಟತರವಾದ, ಭವ-ಹುಟ್ಟುವಿಕೆ (ಜನ್ಮ).

(೨೨೭) ಕೃತವಿವೇಕದ-ಮನಸ್ಸಿನಲ್ಲಿ ವಿಚಾರಮಾಡಿದ, ಠಾವು-ಸಂದರ್ಭ, ಲೇಸು-ತಕ್ಕುದು, ಈ ವಿಶೇಷ ವ್ಯವಹರಣೆ-ತಾನು ಸರ್ವವ್ಯಾಪಕನಾಗಿದ್ದರೂ ಜನ್ಮವನ್ನು ಪಡೆದುದು.

(೨೨೮) ನಾಕ-ಸ್ವರ್ಗದಲ್ಲಿ, ಜ-ಹುಟ್ಟಿದವರು (ದೇವತೆಗಳು), ಮಖ-ಯಜ್ಞ, ಹವ್ಯ-ಯಜ್ಞಾದಿಗಳಲ್ಲಿ ದೇವತೆಗಳಿಗಾಗಿ ಮಾಡುವ ಹೋಮ. ಕವ್ಯ-ಪಿತೃಗಳನ್ನು ಕುರಿತು ಮಾಡುವ ಹೋಮ, ವರ್ತನೆ-ನಡೆಯುವಿಕೆ, ತ್ಯಜಿಸಲೀಸನು-ತಪ್ಪುವುದಕ್ಕವಕಾಶವನ್ನು ಕೊಡನು.

ಈತ ಸತ್ತ್ವ ರಜಸ್ತಮೋಗುಣ ।
ದಾತ ವಿಮಲ ಗುಣತ್ರಯಕ್ಕವು ।
ತೀತ ಮಾಯಾಪಾರ ಮಾಯಾ ದೂರ ನೋಡಲಿಕೆ ॥
ಈತನನಿತಿನಿತೆಂದು ಯೋಚನೆ ।
ಗೇತರಲಿ ಠಾವಿಲ್ಲ ಸತ್ತ್ವ ಗು ।
ಣಾತಿಶಯವೇ ಠಾಣಬಂದಿಹುದಣುಗ ಕೇಳೆಂದ ॥ ೨೨೯ ॥

ಆಹುದು ಮತ್ತೇನಿಳೆಯ ಜನ ನಿ ।
ಗ್ರಹವಿದಾವವನಿಂದ ಬಳಿಕೀ ।
ಮಹಿಗೆ ಬಂದ ನಿರೋಧವಾವುದು ಹೇಳಬೇಕೆನಲು ॥
ವಿಹಿತವೇ ವಿಜ್ಞಪ್ತಿ ನಿಮಗೆಂ ।
ದಹತ ಪರಿತೋಷದಲಿ ಮುನಿವರ ।
ನಹಿಮ ಕರ ಕುಲ ಕೀರ್ತಿಕರ ನಂದನರಿಗಿಂತೆಂದ ॥ ೨೩೦ ॥

ಎಲೆ ಕುಮಾರರೆ ಕೇಳಿರೈ ಸಿರಿ ।
ನಿಳಯನೋಲಗಕೆಂದು ಮುನಿಕುಲ ।
ತಿಲಕ ಸನಕ ಸನತ್ಕುಮಾರ ಸನಂದನಾದಿಗಳು ॥
ಬಳಿಸಲಿಸೆ ಬಾಗಿಲಲಿ ತಡೆದರು ।
ಬಲಭರಿತ ಜಯವಿಜಯರಾ ನಿ ।
ರ್ಮಳ ಮನೋರಂಜಕರನೊಡ್ಡಿದ ಕೈಯ ಕಂಬಿಯಲಿ ॥ ೨೩೧ ॥

ಪರಮಹಂಸರಿಗಧಿಕ ತೇಜಿ ।
ಷ್ಠರಿಗೆ ತೇಜೋಭಂಗ ಮುಖದನು ।
ಪರಣಿಗೊಂಬುದೆ ಕೋಪದಲಿ ಬಳಿಕವರು ಬಗೆಗೊಳದೆ ॥

(೨೨೯) ಈ ರಾಮನು ಸಾಮಾನ್ಯರಿಗೆ ಮೂರುಗುಣಗಳಿಂದ ಕೂಡಿದವನಾಗಿಯೂ ತಿಳಿಯಬಲ್ಲ ಜ್ಞಾನಿಗಳಿಗೆ ಅವುಗಳನ್ನು ಮೀರಿದವನಾಗಿಯೂ ಕಾಣುವನು; ಹಾಗೆಯೇ ಮಾಯಾಸ್ವರೂಪನಾಗಿಯೂ ಮಾಯೆಗೆ ಸಿಕ್ಕದವನಾಗಿಯೂ ಇರುವನು; ಆದುದರಿಂದ ಇವನಮಹಿಮೆ ಅಗಾಧವಾದುದು.

(೨೩೦) ಜನನಿಗ್ರಹವು-ಜನಕ್ಕೆಬಾಧೆಯು, ನಿರೋಧ-ಕಷ್ಟವು, ನಿಮಗೆ ವಿಜ್ಞಪ್ತಿ ವಿಹಿತವೇ-ನೀವು ಕೇಳಿಕೊಂಡ ಮಾತು ಯುಕ್ತವಾದುದು, ಅಹತ-ಸ್ವಸ್ಥತೆಯುಳ್ಳವ (ಹೆಚ್ಚಾದ), ಹಿಮ-ಶೈತ್ಯವು, ಅ-ಇಲ್ಲದುದು, ಅಹಿಮ (ಉಷ್ಣ) ಅಹಿಮವಾದ + ಕಿರಣವುಳ್ಳವನು-ಅಹಿಮಕರ (ಸೂರ್ಯ).

(೨೩೧) ಸಿರಿ-ಲಕ್ಷ್ಮಿಗೆ, ನಿಲಯ-ಆಶ್ರಯನು (ವಿಷ್ಣು), ಬಳಿಸಲಿಸೆ-ಸಮೀಪಕ್ಕೆ ಬರಲು, ನಿರ್ಮಳಮನೋರಂಜಕರನು-ಪರಿಶುದ್ಧವಾದ ಮನಸ್ಸಿನಿಂದ ಪ್ರಕಾಶಿಸುತ್ತಿರುವರನ್ನು, ಒಡ್ಡಿದ-ಅಡ್ಡಲಾಗಿಟ್ಟ, ಕಂಬಿ-ಕೋಲು.

ದುರುಳ ರಿಬ್ಬರಿಗಿತ್ತರತಿ ನಿ ।
ಷ್ಠುರದ ಶಾಪವನಸುರ ವಂಶೋ ।
ತ್ಕರದೊಳಗೆ ಸಂಭವಿಸಿ ನೀವೆಂದಧಿಕ ರೋಷದಲಿ ॥ ೨೩೨ ॥

ಸರಸರಿಸಿ ಬಳಿಕಾ ಮುನೀಂದ್ರರು ।
ಸರಸಿಜಾಕ್ಷನ ದರುಶನಕೆ ಬರ ।
ಬರಲು ಬಳಿಯಲಿ ಬಂದು ದೂರಿದರವರು ಮುನಿವರರ ॥
ಕರದ ಸನ್ನೆಯಲುಭಯ ಕಿಂಕರ ।
ವರರ ಖೇದವ ಸಂತವಿಸಿ ಮುನಿ ।
ವರರನುಚಿತದಲುಪಚರಿಸಿ ಜಯ ವಿಜಯರಿಗೆ ನುಡಿದ ॥ ೨೩೩ ॥

ಮುನಿವಚನವಿದು ಹುಸಿಯದಾಸುರ ।
ಜನನ ತಪ್ಪದು ನಿಮಗೆ ನೀವೇ ।
ಳನೆಯ ಭವದಲಿ ಬಂಧುತನದಲಿ ನಮ್ಮನೈದುವುದು ॥
ಅನುಮತವಿದೊಂದಲ್ಲದಿರೆ ಮೂ ।
ರನೆಯ ಭವದಲರಾತಿ ಕೃತ ಭಾ ।
ವನೆಯಲೈದುವುದೊಂದು ಮತವಿದೆ ಹೇಳಿ ನೀವೆಂದ ॥ ೨೩೪ ॥

ಅರಿವಾವೆಲೆ ದೇವ ಹತ್ತಕೆ ।
ಮೂರು ಕಳೆದುಳಿದಿರ್ದ ಭವಗಳ ।
ಮೂರು ಜನ್ಮವೆ ಸಾಕು ಹಗೆತನದಿಂದ ಬೇಗದಲಿ ॥
ಸಾರುವೆವು ನಿಮ್ಮಡಿಯ ಸಿರಿಚರ ।
ಣಾರವಿಂದವನೆಂದು ವಿಜ್ಞಾ ।
ಸಾರರುದಿಸಿದರಸುರ ವಂಶದಲಧಿಕ ತೇಜದಲಿ ॥ ೨೩೫ ॥

(೨೩೨) ಪರಮಹಂಸರಿಗೆ- ತತ್ತ್ವಜ್ಞಾನವುಳ್ಳ; ತೇಜಸ್ವರಿಗೆ-ತೇಜಸ್ವಿಗಳಿಗೆ; ತೇಜೋಭಂಗ ಮುಖದ-ತೇಜೋವಧೆಯನ್ನು ಪಡೆದ ಮುಖದ, ಅನುಸರಣೆಗೊಂಬುದೆ-ಸಹಿಸುವಿಕೆಯೊಡಂಬಡುವುದೆ ? ಬಗೆಗೊಳದೆ-ಲಕ್ಷ್ಯವಾಡದೆ.

(೨೩೩) ಸರಸರಿಸಿ-ಸಂಭ್ರಮದಿಂದ (ಬೇಗನೆ); ಸನ್ನೆ-ದ್ಭ. ಸಂಜ್ಞಾ-ತ್ಸ. ಉಭಯಕಿಂಕರ-ಸೇವಕರಿಬ್ಬರ.

(೨೩೪) ಅಸುರ-ರಾಕ್ಷಸ ಸಂಬಂಧವಾದ, ಭವ-ಜನ್ಮ ; ಬಂಧುತನದಲಿ-ಮಿತ್ರಭಾವದಲ್ಲಿದ್ದು, ಅರಾತಿ ಕೃತಭಾವನೆಯಲಿ-ಶತ್ರುಗಳಾಗಿದ್ದು; ನೀವೇ......ಅನುಮತವಿದೊಂದು ಅಲ್ಲದಿರೆ......ದೊಂದು ಇದೆ ಮತವು ನೀವು ಹೇಳಿ ಎಂದ-ಎಂದನ್ವಯ.

(೨೩೫) ಅರಿವು-ಸಮರ್ಥರಲ್ಲ (ಒಲ್ಲೆವು); ಸಾರುವೆವು-ಸೇರುವೆವು ; ನಿಮ್ಮಡಿಯ-ನಿಮ್ಮ (ಅತ್ಯಂತ ಗೌರವವನ್ನು ತೋರ್ಪಡಿಸಲು ನೀವು ಎಂಬುವಕ್ಕೆ ನಿಮ್ಮಪಾದ ಎಂದು ಹೇಳುವು ದುಂಟು); ವಿಜ್ಞಾಸಾರರು-ಜ್ಞಾನಾಧಿಕ್ಯವುಳ್ಳವರು.

ಕಂದ ಕೇಳು ಹಿರಣ್ಯ ಲೋಚನ ।
ನೆಂದು ವೀರ ಹಿರಣ್ಯಕಾಸುರ ।
ನೆಂದು ಜನಿಸಿದರೊಂದು ಜನ್ಮದಲವರೊಳಾದಿಯಲಿ ॥
ಕೊಂದನೊಬ್ಬನ ಸೂಕರನ ರೂ ।
ಪಿಂದಲೊಬ್ಬನ ನರಹರಿಯ ರೂ ।
ಪಿಂದ ಲಕ್ಷ್ಮೀಕಾಂತನಹಿತ ಕೃತಾಂತನಂದಿನಲಿ ॥ ೨೩೬ ॥

ಎರಡನೆಯ ಜನ್ಮದಲಿ ಜನಿಸಿದ ।
ಪರಿಯ ಕೇಳೈ ಹೇಳುವೆನು ಸರ ।
ಸಿರುಹ ಗರ್ಭನ ಕೇಳಿ ಬಲ್ಲೈ ಶ್ರುತಿಗಳೂಹೆಯಲಿ ॥
ಪರಮ ಮುನಿಪ ಪುಲಸ್ತ್ಯನಾ ಸರ ।
ಸಿರುಹ ಗರ್ಭನ ಮಾನಸದಲವ ।
ತರಿಸಿದನು ತನ್ಮುನಿಪಗಾದನು ವಿಶ್ರವಸು ಬಳಿಕ ॥ ೨೩೭ ॥

ಆ ಮುನಿಗೆ ಕುಲವಧುವಿನಲಿ ಕೀ ।
ರ್ತ್ಯಾಮನೋಹರ ರಾಜರಾಜ ನು ।
ಹಾಮಹಿಮನುದಿಸಿದನು ಸಕಲೈಶ್ವರ್ಯಗಳು ಸಹಿತ ॥
ವ್ಯೋಮಕೇಶನ ಭಕ್ತಿಯಲಿ ನಿ ।
ಸ್ಸೀಮನಾದನು ವಿಶ್ರವಸು ಬಳಿ ।
ಕಾ ಮಗನನೇ ಸಲಹಿಕೊಂಡಿರ್ದನು ಸರಾಗದಲಿ ॥ ೨೩೮ ॥

ತರುಣ ಕೇಳೀಚೆಯಲಿ ಲಂಕಾ ।
ಪುರದ ಸಿರಿ ಸೇರಿರ್ದುದಾ ಶಾ ।
ರ್ವರಿಯ ಪರಿಯಟನ ಪ್ರಚಂಡ ಸುಮಾಲ್ಯವಂತಂಗೆ ॥

(೨೩೬) ಹಿರಣ್ಯ ಲೋಚನ-ಹಿರಣ್ಯಾಕ್ಷ; ಹಿರಣ್ಯಕಾಸುರ-ಹಿರಣ್ಯಕಶಿಪು; ಸೂಕರನ-ಹಂದಿಯ (ಮಹಾ ವರಾಹ), ನರಹರಿ-ನರಸಿಂಹ; ಅಹಿತ-ಶತ್ರುಗಳಿಗೆ, ಕೃತಾಂತ-ಯಮನಂತಿರುವವನು, ಕೃತ-ಮಾಡಲ್ಪಟ್ಟ, ಅಂತ-ಕೊನೆ (ನಾಶ) ಉಳ್ಳವನು-ಕೃತಾಂತ (ಯಮ).

(೨೩೭) ಸರಸಿರುಹ-ಕಮಲವು, ಗರ್ಭ-ಗರ್ಭವು (ಉತ್ಪತ್ತಿ ಸ್ಥಾನವು) ಯಾರಿಗೋ ಅವನು (ಬ್ರಹ್ಮ); ಶ್ರುತಿಗಳ ಊಹೆಯಲಿ-ವೇದಗಳನ್ನು ವಿಚಾರ ಮಾಡುವುದರ ಮೂಲಕ.

(೨೩೮) ಕುಲವಧು-ಹೆಂಡತಿ, ಕೀರ್ತಿ + ಆ ಮನೋಹರ (ಮಗ)-ಯಶಸ್ಸಿನಿಂದ ರಮ್ಯನಾದ; ರಾಜರಾಜ-ಕುಬೇರ; ವ್ಯೋಮ-ಆಕಾಶವು, ಕೇಶ ಕೂದಲುಗಳು ಯಾರಿಗೋ ಅವನು, ವ್ಯೋಮಕೇಶ (ಶಿವ).

ಹರಿಯು ವೈರದಲಳಿದರವರಿ ।
ಬ್ಬರು ಸಹೋದರರಾ ಮಹಾಪುರ ।
ವರಹರಪ್ರಿಯಗಾಯ್ತು ವಿಷ್ಣುವಿನಿಂದ ಪೂರ್ವದಲಿ ॥ ೨೩೯ ॥

ಹದನನರಿದಿದ ನೋಡಿ ಬದುಕಿದ ।
ತ್ರಿದಶವೈರಿ ಸುಮಾಲ್ಯವಂತನು ।
ಪದಪ ಭಜಿಸಿ ಪುಲಸ್ತ್ಯತನುಜಗೆ ತನ್ನ ನಂದನೆಯ ॥
ಮದುವೆಯನು ಮಾಡಿದನು ಬಳಿಕಾ ।
ಸುದತಿಗಾದರು ಸುತರು ಖಳ ದಶ ।
ವದನನಗ್ರದ ಕುಂಭಕರ್ಣ ನಿಶಾಟರವನಿಯಲಿ ॥ ೨೪೦ ॥

ಅವರು ಜಯವಿಜಯರುಗಳೆರಡನೆ ।
ಯವತರಣದವರೀಗ ಮೇಲುದು ।
ಭವಿಸಿದನು ಹರಿಭಕ್ತಿ ಭೂಷಣ ವರವಿಭೀಷಣನು ॥
ಇವರು ಮೂವರು ಮೇಲೆ ಕೈಕಸಿ ।
ಗವತರಿಸಿದಳು ಮೃತ್ಯು ರಾಕ್ಷಸ ।
ನಿವಹಕಗ್ರದ ಶೂರ್ಪಣಖೆಯೆಂಬವಳು ಕೇಳೆಂದ ॥ ೨೪೧ ॥

ಬಳಿಕ ಮೆಚ್ಚಿಸಿದರು ತಪಸ್ಸ ।
ನಿಮ್ಮಳಿತ ಸಾರಂಭದಲಿ ಶಂಕರ ।
ಸಲಿಲ ಸಂಭವ ಭವರ ಬಹಳಾಯಾಸ ಮಾರ್ಗದಲಿ ॥
ಇಳಿಯ ತಮ್ಮದು ಮಾಡಿಕೊಂಡ ।
ಪ್ಪಳಿಸಿದರು ಮಲೆತರಸುಗಳ ಕೈ ।
ಗೊಳಿಸಿ ಕಾದಿ ಕುಬೇರನನು ಹೊರವಡಿಸಿದರು ಪುರವ ॥ ೨೪೨ ॥

(೨೩೯) ಶಾರ್ವರಿಯು-ರಾತ್ರಿಯು, ಪರಿಯುಚರ-ಸಂಚರಿಸುವವರು (ರಾಕ್ಷಸರ) ಪ್ರಚಂಡ-ಶೂರನಾದ; ಇಬ್ಬರು-ಪುಲಸ್ತ್ಯ, ವಿಶ್ರವಸು; ಪುರವರ-ಶ್ರೇಷ್ಠವಾದ ತ್ರಿಪುರವನ್ನು, ಹರ-ನಾಶ ಮಾಡಿದವನು (ಈಶ್ವರ) ಅವನ ಪ್ರಿಯ-ಮಿತ್ರ (ಕುಬೇರ).

(೨೪೦) ಇದ ಹದನನು-ಈ ಸಂದರ್ಭವನ್ನು, ತ್ರಿ-ಮೂರಾದ (ಬಾಲ್ಯ, ಯೌವನ, ಕೌಮಾರ), ದಶ-ಅವಸ್ಥೆಗಳುಳ್ಳವರು (ದೇವತೆಗಳು), ಸು-ಉತ್ತಮವಾದ, ದತಿ-ಹಲ್ಲುಳ್ಳವಳು (ಹೆಂಗಸು); ನಿಶಾ-ರಾತ್ರಿಯಲ್ಲಿ, ಅಟ-ಸಂಚರಿಸುವವರು (ರಾಕ್ಷಸರು).

(೨೪೧) ಮೇಲೆ-ಇಬ್ಬರಿಗಿಂತ ಹೆಚ್ಚಾಗಿ, ರಾಕ್ಷಸನಿವಹಕೆ ಮೃತ್ಯು ಅಗ್ರದ ಶೂರ್ಪಣಖೆ; ಮೃತ್ಯು-ತ್ಸ. ಮಿತ್ತು, ಮಿಳ್ತು-ದ್ಭ; ಶೂರ್ಪ-ಮೊರದಂತೆ, ನಖ-ಉಗುರುಗಳುಳ್ಳವಳು.

(೨೪೨) ಸಲಿಲ ಸಂಭವ ಭವ-ಬ್ರಹ್ಮ; ಮಲೆತ-ಗರ್ವಿಷ್ಠರಾದ, ಕೈಗೊಳಿಸಿ-ಸೆರೆಹಿಡಿದು; ಪುರವ-ಲಂಕಾಪಟ್ಟಣದಿಂದ; ಇಲ್ಲಿ ಪಂಚಮ್ಯರ್ಥದಲ್ಲಿ ದ್ವಿತೀಯೆ ಬಂದಿದೆ; ಶಂ-ಸುಖವನ್ನು, ಕರ-ಉಂಟುಮಾಡುವನು-ಶಂಕರ (ಶಿವ).

ಆದುದವರಿಗೆ ಲಂಕೆ ದಿನ ದಿನ ।
ಕಾದುದಖಿಳೈಶ್ವರ್ಯವಭವನ ।
ನೈದಿ ಬದುಕಿದನಾ ಧನೇಶ್ವರ ಮೇಲೆ ಮಯನೆಂಬ ॥
ಆದಿತೇಯ ವಿರೋಧಿ ಸುತೆ ಮಂ ।
ಡೋದರಿಯ ತಂದಿತ್ತನಾ ಕ್ರ ।
ವ್ಯಾದ ಚಕ್ರೇಶಂಗೆ ಹೇಳುವುದೇನು ಬಳಿಕೆಂದು ॥ ೧೪೩ ॥

ಜನಿಸಿದನು ಬಳಿಕವಳ ಗರ್ಭದ ।
ಲನಿಮಿಷೇಂದ್ರ ವಿರೋಧಿ ಸೇರಿದು ।
ದನುಗತದ ಸಿರಿಯವನ ದೆಸೆಯಿಂದಿಂದ್ರ ವೈಭವದ ॥
ದನುಜ ಮನುಜಾಮರ ಮಹೋರಗ ।
ಜನ ತೃಣಪ್ರತಿಯಾಯ್ತು ದಶ ದಿ ।
ಕ್ಕಿನ ಪುರಾಧಿಪರೆಡೆಗೆ ನಡೆದುದು ದಂಡು ಬಳಿಕೆಂದ ॥ ೧೪೪ ॥

ಕಾದಿದನು ಬಳಿಕಣ್ಣನಲಿ ಗತ !
ವಾದುದಾತನ ಸೈನ್ಯ ಸೋಲದ ।
ಹಾದಿಯಲಿ ನಿಲಿಸಿದನು ಧನಪನನಾ ಧನೇಶ್ವರನು ॥
ಸಾಧಿಸಿದ ಮಹದೈಶ್ವರಿಯವನು ।
ಸೇದಿಕೊಂಡನು ಪುಷ್ಪಕವ ಮೇ ।
ಲಾ ದುರಾಗ್ರಹಿ ಧಾಳಿಯಿಟ್ಟನು ಧೂರ್ಜಟಿಯ ಗಿರಿಗೆ ॥ ೧೪೫ ॥

ತಡೆದುದಾಗಿರಿ ಗರುವ ಭಟನು ।
ಗ್ಗಡದ ದಿವ್ಯ ವಿಮಾನವನು ಖಳ ।
ಕಿಡಿ ಮಸಗೆ ಕಿತ್ತೆತ್ತಿದನು ಮೃತ್ಯುಂಜಯನ ಗಿರಿಯ ॥

(೧೪೩) ಅಭವ-ಜನ್ಮವಿಲ್ಲದವನು (ಈಶ್ವರ); ಮಯ-ಇವನು ರಾಕ್ಷಸರ ಬಡಗಿ; ಅದಿತಿಯ ಮಕ್ಕಳು-ಆದಿತೇಯರು (ದೇವತೆಗಳು) ಅವರಿಗೆ ವಿರೋಧಿ-ಶತ್ರು (ರಾಕ್ಷಸ); ಕ್ರವ್ಯ-ಮಾಂಸವನ್ನು, ಅದ-ತಿನ್ನುವವರು-ಕ್ರವ್ಯಾದ (ರಾಕ್ಷಸರು); ಚಕ್ರೇಶ-ಚಕ್ರವರ್ತಿ.

(೧೪೪) ಅನಿಮಿಷ-ರೆಪ್ಪೆಗಳಿಲ್ಲದವರು ಅವರಿಗೆ ಇಂದ್ರ-ಒಡೆಯ (ಇಂದ್ರ) ಅವನ ವಿರೋಧಿ-ಶತ್ರು (ಇಂದ್ರಜಿತ್ತು); ತೃಣಪ್ರತಿ-ಹುಲ್ಲಿಗೆ ಸಮ.

(೧೪೫) ಗತವಾದುದು-ನಾಶವಾಯಿತು; ಸೋಲದ-ಅಪಜಯದ; ಸೇದಿಕೊಂಡನು-ಕಿತ್ತುಕೊಂಡನು; ದುರಾಗ್ರಹಿ-ಕೆಟ್ಟ ಕೋಪವುಳ್ಳವನು, ಧಾಳಿಯಿಟ್ಟನು-ದಂಡೆತ್ತಿಹೋದನು, ಧೂರ್ಜಟಿ-ಜಡೆಯಭಾರವುಳ್ಳವನು (ಶಿವ).

ಮೃಡನರಿದು ನಗುತೊತ್ತಲಾಗಿರಿ ।
ಯಡಿಯಲೇ ಕೈಸಿಕ್ಕಿ ಜಗ ನಡು ॥
ನಡುಗಲೊದರಿದನವನು ವರ್ಷ ಸಹಸ್ರ ಪರ್ಯಂತ ॥ ೨೪೬ ॥

ಬಿಡಿಸಿದನು ಬಂದಜನು ಮೊಮ್ಮನು ।
ಹಡೆದ ಮಗನಿವನೆಂದು ವಂದಿಸಿ ।
ಮೃಡಗೆ ಬಳಿಕವ ಭಜಿಸಿದನು ಬಾಲೇಂದುಶೇಖರನ ॥
ಪಡೆದನಾಯುಷ್ಯವನು ತನ್ನಲಿ ।
ಕೆಡದ ಮಹದೈಶ್ವರ್ಯವನು ಬಲು ।
ಖಡುಗವನು ವರ ಚಂದ್ರಹಾಸಕವೆಂಬ ನಾಮಕದ ॥ ೨೪೭ ॥

ದೃಢತರದ ವರವಾಯ್ತು ಸಿರಿಯಾ ।
ಯ್ತೆಡೆವರಿಯದುಬ್ಬರದ ಶೌರ್ಯದ ।
ಕಡಲು ಕೈವಶವಾದುದೆಂಬುಮ್ಮಹದ ಗರ್ವದಲಿ ॥
ಒಡನೆ ಧಾಳಿಯನಿಕ್ಕಿ ಶಕ್ರನ ।
ತುಡುಕಿ ತೇಜವ ಕೊಂಡು ವಹ್ನಿಯ ।
ನೆಡಹಿ ಕಾಣದೆ ದಳವುಳಿಸಿದನು ಧರ್ಮರಾಜನಲಿ ॥ ೨೪೮ ॥

ಕಾಳಿಗಕೆ ನೆರೆದಖಿಳ ದೂತರ ।
ಧೂಳಿಗೆದರಿದು ಮೃತ್ಯುವಿನ ಗೋ ।
ನಾಳಿಯಲಿ ಚಾಚಿದನು ಚೌಪಟ ಚಂದ್ರಹಾಸಕವ ॥
ಕಾಲನಡುಗಿದನನಿತರಲಿ ದಿ ।
ಕ್ಪಾಲತನವನು ಬಿಸುಟ ನಿರುತಿಯು ।
ಮೇಲೆ ಮೇಲಲ್ಲಿಂದ ನಡೆದಾಕರಿಸಿದನು ಧನವ ॥ ೨೪೯ ॥

(೨೪೬) ಗರುವ-ಬಲಿಷ್ಠನಾದ; ಉಗ್ಗಡ-ದ್ಭ., ಉತ್ಕಟ-ತ್ಸ.; ಗಿರಿಯ-(ಕೈಲಾಸ) ಪರ್ವತವನ್ನು; ಮೃತ್ಯು-ಯಮನನ್ನು, ಜಯು-ಜಯಿಸಿದವನು (ಈಶ್ವರ).

(೨೪೭) ಮೊಮ್ಮನು-ಮೊಮ್ಮಗನು (ವಿಶ್ರವಸ್ಸು); ಮೃಡ-(ಪ್ರಳಯಕಾಲದಲ್ಲಿ ಲೋಕವನ್ನು) ವ್ಯಥೆಪಡಿಸುವವನು (ಈಶ್ವರ); ಬಾಲೇಂದು-ಬಾಲ ಚಂದ್ರನು, ಶೇಖರ-ತಲೆಯಲ್ಲಿ ಯಾರಿಗೋ ಅವನು (ಬ. ವ್ರೀ.); ಆಯುಷ್ಯ-ತ್ಸ., ಆಯುಸ-ದ್ಭ.

(೨೪೮) ಎಡೆಯಿಂ + ಪರಿಯದ-ಎಡೆವರಿಯದ (ಕ್ರಿ. ಸ.)-ಶಾಶ್ವತವಾದ; ಉಮ್ಮಹ-ಮದ; ಶಕ್ರ-ಇಂದ್ರ, ತುಡುಕಿ-ಹಿಡಿದು; ವಹ್ನಿ-ಅಗ್ನಿ; ದಳವುಳಿಸು-ಸೂರೆಮಾಡು.

(೨೪೯) ಧೂಳಿಗೆದರಿದು-ಪುಡಿಪುಡಿಮಾಡಿ ಹರಡಿ, ಗೋನಾಳಿ-ಕೊರಲು; ಚೌಪಟ-ದ್ಭ, ಚತುಷ್ಪಥ-ತ್ಸ.; ಚೌಪಟ-ನಾಲ್ಕುದಾರಿ ಕೂಡುವ ಸ್ಥಳ; (ಇಲ್ಲಿ ಶ್ರೇಷ್ಠವಾದ ಎಂಬರ್ಥ.; ಆಕರಿಸಿದನು-ಬಾಚಿಕೊಂಡನು.

ವರುಣ ಬಳಿಕೀ ಹದನ ಕೇಳುತ ।
ಶರಣು ಪೊಕ್ಕನು ಕಾಯಬೇಹುದು ।
ಹರಣವನು ನೀನೆಂದು ಕೊಟ್ಟನು ಸಕಲ ವಸ್ತುಗಳ ॥
ಕರುಣದಲಿ ಬಿಟ್ಟಾತನನು ಮುಂ ।
ದರುಣ ಪಟ ಪರಿಧಾನ ಶೌರ್‍ಯ ।
ಭರಣ ಧಾಳಿಯನಿಕ್ಕಲೋಡಿದನನಿಲ ಭೀತಿಯಲಿ ॥ ೨೫೦ ॥

ಗೆಲಿದು ನಾನಾ ಲೋಕಪಾಲಕ ।
ರೊಳು ಧನವನೆರೆ ಕವರಿಕೊಂಡಿಳಿ ।
ದಿಳೆಯ ರಾಯರ ಬಾಯ್ಗಳಲಿ ಬೆರಳಿಡಿಸಿ ಶರಧಿಗಳ ॥
ವಳಯದಖಿಳ ದ್ವೀಪ ಪತಿಗಳ ।
ತಲೆಗಳನು ಹೊಡೆದಲ್ಲಿ ತನ್ನ ।
ಗ್ಗಳೆಯ ಭೃತ್ಯರನಿರಿಸಿ ಬಂದನು ಮರುತನೃಪನೆಡೆಗೆ ॥ ೨೫೧ ॥

ಆ ಮರುತ್ತನ ಯಜ್ಞ ಕೈತಂ ।
ದಾ ಮರುದ್ಗಣ ಮುನಿಜನಂಗಳ ।
ತೋಮರದ ತೋಟಿಯಲಿ ಕೆದರಿದ ಕದನ ಕೇಳಿಯಲಿ ।
ಆ ಮಹೀಶನ ಗೆಲಿದು ನಿಮ್ಮಯ ।
ತಾಮರಸ ಸಖ ಕುಲದಯೋಧ್ಯಾ ।
ಭೂಮಿಪತಿಯನರಣ್ಯನಲಿ ತೊಡಗಿದನು ಸಂಗರವ ॥ ೨೫೨ ॥

ಕಾದಿದನು ಸಮಪಾಳಿಯಲಿ ಹದಿ ।
ನೈದು ದಿನಪರಿಯಂತ ಸೋಲವು ।
ಮೇದಿನೀಶಂಗಾಗದಿರೆ ಮಾಯಾಭಿಯೋಗದಲಿ ॥
ಕಾದು ಕೊಂದನು ತನ್ನೃಪನ ಬಳಿ ।
ಕಾದುದಗ್ಗದ ಶಾಪವಾತನಿ ।
ನಾ ದಶಗ್ರೀವಂಗೆ ರಾಕ್ಷಸ ಸಾರ್ವಭೌಮಂಗೆ ೨೫೩ ॥

(೨೫೦) ಅರುಣಪಟ ಪರಿಧಾನ-ಕೆಂಪು ಬಟ್ಟೆಯನ್ನುಟ್ಟಿರುವ;

(೨೫೧) ನೆರೆ-ಚೆನ್ನಾಗಿ, ಕವರಿಕೊಂಡು-ಕಿತ್ತುಕೊಂಡು; ಬಾಯ್ಗಳಲಿ ಬೆರಳಿಡಿಸಿ--ಭಯಪಡಿಸಿ; ದ್ವೀಪ-ತ್ಸ., ದೀವ-ದ್ಭ.

(೨೫೨) ಮರುದ್ಗಣ-ದೇವತೆಗಳ ಗುಂಪು, ತೋಮರ-ಕಬ್ಬಿಣದ ತಲೆಯುಳ್ಳ ಮೂರುಮೊಳವಿರುವ ಕೆಂಪು ಬಣ್ಣದ ಮರದ ದೊಣ್ಣೆ; ತೋಟಿ-ಕಲಹ.

(೨೫೩) ಸಮಪಾಳಿಯಲಿ-ಸಮಾನವಾದ ಪರಾಕ್ರಮದಿಂದ; ಮಾಯಾಭಿಯೋಗ-ಮಾಯೆಯನ್ನು ಉಪಯೋಗಿಸುವುದು (ಮರೆಯಾಗಿ ನಿಂತು ಯುದ್ಧಮಾಡುವುದು); ಗ್ರೀವ-ಕೊರಳು.

ಕ್ಷಿತಿಸುತಾ ಸುತ ಕೇಳು ರಾಕ್ಷಸ ।
ಪತಿ ಬಳಿಕ ಬರುತಿರಲು ವೇದಾ ।
ವತಿಯು ಕಂಡನು ಸೋತನಾ ಕಾಮಿನಿಯ ರೂಪಿಂಗೆ ॥
ಸತಿಗೆ ಬಳಿಕದು ಸಲುವುದೇ ರಘು ।
ಪತಿಯು ಕೈಯಲಿ ರಣ ಮುಖದಲುಪ ।
ಹತಿ ನಿನಗೆ ಬರಲೆನುತ ಹೊಕ್ಕಳು ಹವ್ಯವಾಹನನ ॥ ೨೫೪ ॥

ಬಂದನಲ್ಲಿಂ ಮೇಲೆ ಜಯಮುಖ ।
ದಿಂದ ಲಂಕಾಪುರಿಗೆ ಸೇರಿತು ।
ಮುಂದಿ ಹಿಂದಣ ರಾಕ್ಷಸೇಂದ್ರರ ಬಳಿಯ ಭಟರುಗಳು ॥
ಕೊಂದ ಸುರ ನರ ಪತಿಗಳ ಬಲಾ ।
ವೃಂದ ಷೋಡಶ ಲಕ್ಷ ಭೋಗಕೆ ।
ಸಂದರಾ ದಿನಕಾ ನಿಶಾಚರ ಸಾರ್ವಭೌಮಂಗೆ ॥ ೨೫೫ ॥

ಗಿರಿಗಳಂಜುವುವಿವನ ಕಾಣುತ ।
ಶರಧಿಗಳನವ ಹೇಳದಿರು ಶಂ ।
ಕರ ಸರೋಜಾಸನ ಸುರೇಂದ್ರಾದಿಗಳ ಕಂಪನವ ॥
ತರುಣ ಹೇಳುವುದೇನು ದಾನವ ।
ಹರನ ಹವಣೇನರಿಯನೀ ಮಿ
ಕ್ಕರಿಗಳೀ ದಶಶಿರನ ಮಣಿಸಲು ತಕ್ಕರಿಲ್ಲೆಂದ ॥ ೨೫೬ ॥

ಕ್ರತುಗಳಡಗಿದುವಖಿಳ ಸುರರಾ ।
ಹುತಿಗಳುಕ್ಕುಡಿಸಿದುವು ಕಾಮ್ಯ ।
ಪ್ರತತಿಯೋಸರಿಸಿದುವು ಧಾರ್ಮಿಕರಳ್ಳೆ ಬಾರಿದುವು ॥
ಕ್ಷಿತಿಗೆ ಹೊರೆ ಬಲವಾಯ್ತು ಬದುಕುವ ।
ಗತಿಯ ಕಾಣದೆ ಸಕಲ ದೇವ ।
ಪ್ರತತಿ ನೆರೆದೈತಂದು ಕಂಡುದು ಕಮಲಸಂಭವನ ॥ ೨೫೭ ॥

(೨೫೪) ರೂಪು-ದ್ಭ., ರೂಪ-ತ್ಸ.; ಹವ್ಯ-ಹೋಮಮಾಡಿದ ಪದಾರ್ಥಗಳನ್ನು, ವಾಹನ-ತೆಗೆದುಕೊಂಡು ಹೋಗುವವನು (ಅಗ್ನಿ.)

(೨೫೫) ವೃಂದ-ಸಮೂಹ; ವೃಂದ-ತ್ಸ., ಬಿಂದ-ದ್ಭ.

(೨೫೬) ದಾನವ-ರಾಕ್ಷಸರನ್ನು, ಹರ-ಕೊಲ್ಲುವವನು (ವಿಷ್ಣು) ಹವಣ್-ದ್ಭ., ಪ್ರಮಾಣ-ತ್ಸ.; ಹವಣ-(ಸಾಮರ್ಥ್ಯದ) ಅಳತೆಯನ್ನು; ಐನರಿಯನು-ಎಷ್ಟೆಂದು ಕಾಣನು (ಲಕ್ಷ್ಯಮಾಡನು); ಮಣಿಸಲು-ಬಗ್ಗಿಸಲು.

(೨೫೭) ಉಕ್ಕುಡಿಸು-ಶಕ್ತಿಹೀನವಾಗು; ಕಾಮ್ಯಪ್ರತತಿ-ಕಾಮ್ಯವ್ರತಗಳ ಗುಂಪು; ಓಸರಿಸು-ನಿಂತುಹೋಗು; ಅಳ್ಳೆ-ಪಕ್ಕೆ; ಬಾರಿದುವು-ಹೊಡೆದುಕೊಂಡವು.

ಆತನಾದೂರಿಂದ ನಮುಚಿ ವಿ।
ಘಾತಿ ಮುಖ್ಯ ಸಮಸ್ತ ಸುರ ಸಂ।
ಜಾತ ಸಹಿತೈದಿದನು ವಿಬುಧವಿರೋಧಿ ಮರ್ದನನ॥
ಭೂತಮಯ ಪಂಚಕನ ತತ ನಿ।
ರ್ಧೂತ ದುರಿತ ಘರಟ್ಟ ಭಯ ಜೀ।
ಮೂತ ಪಟಲ ಸಮೀರಣನ ದುಸ್ತರ ಮಹಾಂಬುಧಿಯ ॥ ೨೫೮ ॥

ಅಬ್ಬರಿಸಿ ತೆರೆ ಮುಸಗಿ ಗಗನ।
ಕುಬ್ಬರಿಸಿ ತಳಮಳಲ ಮೊಗೆದೊಡ।
ನುಬ್ಬರಿಸಿ ಹೊಡಹೊಡಕರಿಸಿ ಭೋರೆನುತ ಭೋರ್ಗರೆದು॥
ಬೊಬ್ಬುಳಿಯ ಬೆಳ್ನೊರೆಗಳಟ್ಟುಳಿ।
ಯೊಬ್ಬುಳಿಯನುರವಣಿಸುತುರವಣಿ।
ಗೊಬ್ಬಿನಲಿ ಮದವೇರಿ ಪಾಲ್ಗಡಲೆಸೆದುದಿದಿರಿನಲಿ ॥ ೨೫೯ ॥

ಉಳಿದುದೆಡೆಯಿಲ್ಲದೆ ನಭೋಮಂ।
ಡಳಮಹಾದೇವೀತ ಮುಳಿದೊಡೆ।
ವಿಳಯದಲಿ ಬೆಚ್ಚುವುದಲಾ ಬ್ರಹ್ಮಾಂಡ ಘಟವೆನುತ॥
ಒಲೆದು ಮೌಳಿಯನಬುಜಭವನಾ।
ಜಲನಿಧಿಗೆ ಕೈಮುಗಿದು ಬಟ್ಟೆಯ।
ಗೆಲಿದು ಬರುಹಿರ್ಮುಖರು ಸಹಿತೊಳಹೊಕ್ಕನಂಬುಧಿಯ ॥ ೨೬೦ ॥

ಕೇಳಿದೈಯೆಲೆ ರಾಜಸೂನುಘ।
ಣಾಳಿಧರನ ಶರೀರ ಶಯನನ।
ಕಾಲಧರ್ಮ ಕ್ರಿಯೆ ಗತಾಗತದೂರನನುಪಮನ॥

(೨೫೮) ನಮುಚಿ ವಿಘಾತಿ-ನಮುಚಿಯೆಂಬ ರಾಕ್ಷಸನನ್ನು ಕೊಂದವನು (ಇಂದ್ರ); ವಿಬುಧ-ದೇವತೆಗಳ, ವಿರೋಧಿ-ಶತ್ರು (ರಾಕ್ಷಸ); ತತ-ವಿಸ್ತಾರವಾಗಿ, ನಿರ್ಧೂತ-ನಾಶಮಾಡಲ್ಪಟ್ಟ, ದುರಿತ-ಪಾಪವೆಂಬ, ಘರಟ್ಟ-ಬೀಸುವ ಕಲ್ಲುಳ್ಳ, ಭಯ...ರಣನ-ಅಂಜಿಕೆಯೆಂಬ ಮೋಡಗಳ ಗುಂಪಿಗೆ ಬಿರುಗಾಳಿಯಂತಿರುವವನ (ವಿಷ್ಣುವಿನ).

(೨೫೯) ಬೊಬ್ಬುಳಿ-ನೀರಮೇಲಿಣ ಗುಳ್ಳೆ; ಅಟ್ಟುಳಿಯು-ಗುಂಪಿನ, ಒಬ್ಬುಳಿ-ಸೇರುವಿಕೆ; ಉರವಣಿಸುತ-ರೇಗುತ್ತ; ಉರವಣಿಗೊಬ್ಬಿನಲಿ-ಹೆಚ್ಚುತ್ತಿರುವಗರ್ವದಿಂದ; ಬಿಳಿದು + ನೊರೆ-ಬಿಳ್ನೊರೆ(ವಿಪೂರ್ವ.ಕ)

(೨೬೦) ಒಲೆದು-ಅಲ್ಲಾಡಿಸಿ, ಬಟ್ಟೆಯ ಗೆಲಿದು-ಮಾರ್ಗವನ್ನು ಕಳೆದು, ಬರ್ಹಿ-ಅಗ್ನಿಯು, ಮುಖರು-ಮುಖವು ಯಾರಿಗೋ ಅವರು-ಅಗ್ನಿಯಲ್ಲಿ ಹೋಮಮಾಡಿದ ಹವಿಸ್ಸುಗಳಿಂದ ತೃಪ್ತಿಯನ್ನು ಪಡೆವರು (ದೇವತೆಗಳು).

ಆಲಯವು ಹದಿನಾರು ಲಕ್ಷದ ।
ಮೇಲೆ ಸಾವಿರ ಯೋಜನವು ಬಳಿ ।
ಕೋಲಗದ ಸಂಭ್ರಮವ ಹೊಗಳುವೆನೇನ ತಾನೆಂದ ॥ ೨೬೧ ॥

ಉಸಿರಲೇನದ ಕೋಟಿ ಸಂಖ್ಯೆಯ ।
ಬಿಸುರಹಾಸನರಿದ್ದರಮರ ।
ಪ್ರಸರವಿದ್ದುದು ದಿವ್ಯಋಷಿಗಣವಿದ್ದುದಪರಿಮಿತ ॥
ವಸು ದಿಶಾಧಿಪ ರುದ್ರಗಣ ಸುಮ ।
ನಸ ವಧೂ ನಿಕುರುಂಬವಿದ್ದುದು ।
ನೊಸಲ ಕೈಗಳಲಾದಿನಾರಾಯಣನ ಬಳಸಿನಲಿ ॥ ೨೬೨ ॥

ವರ ಸರಸ್ವತಿ ಶಕ್ತಿ ಮಾಹೇ ।
ಶ್ವರಿ ಮಹಾ ಗಾಯತ್ರಿ ವಿಶ್ವಂ ।
ಭರಿ ಕುಮಾರಿ ವರಾಹಿ ವೈಷ್ಣವಿ ದುರ್ಗಿ ಚಾಮುಂಡಿ ॥
ಪರಮ ಸತಿ ಸಾವಿತ್ರಿ ಸಂಧ್ಯಾ ।
ತರುಣಿ ಮೊದಲಾದಖಿಳ ದೇವಿಯ ।
ರಿರವು ಕಾಣಿಸಿತಾದಿಲಕ್ಷ್ಮಿಯ ಸುತ್ತು ವಳಯದಲಿ ॥ ೨೬೩ ॥

ಉಳಿವುದೊಂದೇ ವಸ್ತು ಕಲ್ಪಂ ।
ಗಳಲಿ ಕಮಲ ಭವಾಮರೇಂದ್ರಾ ।
ವಳಿಗಳಡಗುವುದಾ ಮಹಾತ್ಮನ ಮನದ ನೆನಹಿನಲಿ ॥
ತೊಲಗಿ ದೂರದೊಳಿದ್ದು ಮೆಲ್ಲನೆ ।
ಸುಳಿದರೀ ಬ್ರಹ್ಮಾದಿ ದೇವರು ।
ನಳಿನ ನಾಭನ ಮಹಿಮೆಗಾವುದು ಸೀಮೆ ಕೇಳೆಂದ ॥ ೨೬೪ ॥

(೨೬೧) ಫಣಾಳಿ-ಹೆಡೆಗಳ ಗುಂಪನ್ನು, ಧರ-ಧರಿಸಿದವನು (ಅವಿಶೇಷ); ಕಾಲ... ಮೊಳನ ಹಿಂದೆ ಕಳೆದ ಅಥವಾ ಮುಂದೆ ಬರುವ ಕಾಲ, ನಡೆವಳಿಕೆ, ಕಾರ್ಯ, ಇವುಗಳಿಗೆ ಸಿಕ್ಕದೆ ಇರುವವನನ್ನು.

(೨೬೨) ವಸು-ಧರಾ, ಧ್ರುವಾ, ಸೋಮ, ಅನ, ಅಗ್ನಿ, ಪ್ರಭಂಜನ, ಪ್ರತ್ಯೂಷ, ಪ್ರಭಾಸ, ಈ ಎಂಟು ವಸುಗಳು; ನೊಸಲ ಕೈಗಳಲಿ-ಹಣೆಗಳಲ್ಲಿ ಕೈ ಮುಗಿದುಕೊಂಡು.

(೨೬೩) ಪರಮ ಸತಿ-ಮಹಾ ಪತಿವ್ರತೆಯರು; ಅಖಿಳ ದೇವಿಯರ-ಎಲ್ಲ ಶಕ್ತಿಗಳು.

(೨೬೪) ಕಲ್ಪಂಗಳಲಿ ಒಂದೇ ವಸ್ತು ಉಳಿವುದು, ಕಮಲ...ಡಗುವುದು, ನೆನಹಿನಲಿ ಸ್ಮರಣೆಯಲ್ಲಿ (ಸ್ಮರಿಸಿಕೊಂಡ ಮಾತ್ರಕ್ಕೆ), ತೊಲಗಿ-ಆ ವಿಷ್ಣುವಿನ ದೇಹದಿಂದೀಚೆಗೆ ಹೊರಟು; ಸೀಮೆ-ಅವಧಿ (ಎಲ್ಲೆ, ಮೇರೆ).

ನಾರದನ ಸಂಗೀತವಪ್ಸರ ।
ನಾರಿಯರ ನರ್ತನ ಶ್ರುತಿ ಸ್ಮೃತಿ ।
ಯಾರುಭಟೆಯುಗ್ಗಡಣೆ ಪೌರಾಣ ಪ್ರಬಂಧಗಳ ॥
ಸಾರತರ ಸಮ್ಮೋಹನದ ಕೈ ।
ವಾರ ಕೇಳಿಸಿತಬುಜಭವ ಬೃಂ ।
ದಾರಕರು ಜಯಯೆಂದು ಹೊಗಳಿತು ಸಕಲ ಸುರಕಟಕ ॥ ೨೬೫ ॥

ದೇವ ಜಯ ಜಯ ಸಕಲ ದೇವರ ।
ದೇವ ಜಯ ಶ್ರುತಿಕೋಟಿ ಕನ್ಯಾ ।
ಶ್ರೀವರನೆ ಜಯ ಜಯ ಜನಾರ್ದನ ಭಕ್ತ ಸುರಧೇನು ॥
ದೇವ ರಿಪುಕುಲ ವಿಪಿನ ಪಟುತರ ।
ಪಾವಕಾಖಿಳ ಲೋಕರಕ್ಷಕ ।
ದೇವ ರಕ್ಷಿಸು ನಮ್ಮನೆನುತೆಡೆಗೆಡೆದುದಮರ ಗಣ ॥ ೨೬೬ ॥

ನೊಂದೆವಾವೆಲೆ ದೇವ ಸುರಕುಲ ।
ಬಂದಿಗಾರನ ಕೈಯಲಕಟಾ ।
ತಂದೆ ನೀನೆಮಗಲ್ಲವೇ ನಿಗಮಾಗಮೋಕ್ತದಲಿ ।
ನೊಂದ ನೋವನು ಪರಿಹರಿಸಿ ಕೃಪೆ ।
ಯಿಂದ ಸಲಹುವ ದೇವರಾರೆನು ।
ಗೆಂದು ಮೇಘಧ್ವಾನದಲಿ ಮೊರೆಯಿಟ್ಟುದಮರಗಣ ॥ ೨೬೭ ॥

ಕೇಳಿದನು ಕಡು ದೂರುಕಾರರ ।
ನಾಲಗೆಯ ರಚಿತೋಕ್ತಿಯನು ಕರು ।
ಣಾಳುಗಳ ಬಲ್ಲಿದನು ನಿದ್ರಾಯೋಗ ಮುದ್ರೆಯಲಿ ॥

(೨೬೫) ಆರುಭಟೆಯುಗ್ಗಡಣೆ-ಕೂಗಿ ಉಗ್ಗಡಿಸುವಿಕೆ, ಪ್ರಬಂಧಗಳ-ಕಥೆಗಳ, ಕೈವಾರ-ಶಬ್ದ; ಬೃಂದಾರಕರು-ದೇವತೆಗಳು; ಕಟಕ-ಸೇನೆ.

(೨೬೬) ಶ್ರುತಿಕೋಟಿ-ಅನೇಕ ವೇದಗಳೆಂಬ, ಕನ್ಯಾ ಶ್ರೀ-ಲಕ್ಷ್ಮೀದೇವಿಯು, ವರ-ಪತಿ (ವಿಷ್ಣು); ಜನ-(ದುಷ್ಟ)ಜನವನ್ನು, ಅರ್ದನ-ಶಿಕ್ಷಿಸುವವನು; ಸುರ-ದೇವತೆಗಳ, ಧೇನು-ಹಸು (ಕಾಮಧೇನು); ದೇವರಿಪು...ಪಾವಕ-ರಾಕ್ಷಸರ ಸಮೂಹಕ್ಕೆ ಬಲವಾದ ಅಗ್ನಿಯಂತಿರುವ, ಎಡೆಗೆಡೆದುದು-ನಮಸ್ಕರಿಸಿತು.

(೨೬೭) ಸುರಕುಲ ಬಂದಿಗಾರನ-ದೇವತೆಗಳ ಗುಂಪನ್ನು ಸೆರೆಹಿಡಿದ (ರಾವಣನ); ಮೇಘಧ್ವಾನದಲಿ-ಗುಡುಗಿನ ಶಬ್ದದಿಂದ; ಮೊರೆಯಿಟ್ಟುದು-ಕೂಗಿಕೊಂಡಿತು.

ಅಲಿಗಳನರಲಿಚುತ ನಗೆಗಳ ।
ಮಾಲೆಗಳ ತೆರಳಿಚುತ ಕರೆ ಕ ।
ಟ್ಟೋಳಿಗದ ಕಾತುರರನೆಂದನು ಹರಿ ಸುಪರ್ಣಂಗೆ ॥ ೨೬೮ ॥

ಬಂದನಾಗ ಸುಪರ್ಣ ಸುಮನಸ ।
ವೃಂದದೆಡೆಗಾ ಕಮಲಭವ ಸಂ ।
ಕ್ರಂದನಾದಿ ಸಮಸ್ತ ಸುರಜನ ಮುನಿಜನವ್ರಜವ ॥
ತಂದು ನಿಲಿಸಿದನಬುಜನಾಭನ ।
ಮುಂದೆ ಕುಸುಮಾಂಜಲಿಗಳಲಿ ಮುದ ।
ದಿಂದ ವೈಯಿಕ್ಕಿದರು ಭಯರಸ ಭರಿತ ಭಕ್ತಿಯಲಿ ॥ ೨೬೯ ॥

ಜಯ ಜಯ ಶ್ರೀಕಾಂತ ಲೋಕ ।
ತ್ರಯ ಕೃಪಾಕರ ಭಕ್ತವತ್ಸಲ ।
ಜಯ ಜಯಾಚ್ಯುತ ಜಯ ಸುರಾರ್ಚಿತ ಸಕಲ ಗುಣನಿಲಯ ॥
ಜಯ ಜಗದ್ವಲ್ಲಭ ಜಗನ್ಮಯ ।
ಜಯ ಜಗದ್ರಕ್ಷಕ ಜನಾರ್ದನ ।
ಭಯವಿದೂರನೆ ದೇವ ಸಲಹೆನುತಿರ್ದುದಮರಗಣ ॥ ೨೭೦ ॥

ದೇವ ಕಾರುಣ್ಯಾಂಬುನಿಧಿ ಭೂ ।
ದೇವ ಸುಜನ ಜನೈಕವತ್ಸಲ ।
ದೇವ ದೇವೇಶ ಪ್ರಸಾದ ಸ್ನಿಗ್ಧ ಮುಖ ಕಮಲ ॥
ದೇವ ಲಕ್ಷ್ಮೀಕಾಂತ ವರ ರಾ ।
ಜೀವ ಲೋಚನ ಸುಜನ ಜನ ಕರು ।
ಣಾವಲಂಬನ ಕಾಯಬೇಕೆಂದೊದರಿತಮರಗಣ ॥ ೨೭೧ ॥

(೨೬೮) ನಿದ್ರಾಯೋಗ ಮುದ್ರೆ-ನಿದ್ರೆಯಿಂದ ಕೂಡಿದ ರೀತಿ, ಅಲಿಗಳನು-ಕಣ್ಣುಗಳನ್ನು, ಅರಲಿಚುತ-ತೆರೆಯುತ್ತ, ಕಟಿದು ಊಳಿಗ-ಹೆಚ್ಚಾದ ಸೇವೆ; ಕಾತುರರನು-ಶೀಘ್ರವಾಗಿ ನಡೆಯಿಸುವವರನ್ನು, ಸು-ಒಳ್ಳೆ, ಪರ್ಣ-ಗರಿಗಳುಳ್ಳವನು (ಗರುಡ)

(೨೬೯) ಸುಮನಸ ವೃಂದ-ದೇವತೆಗಳಗುಂಪು; ಅಬುಜ-ಕಮಲದಂತೆ, ನಾಭ-ಹೊಕ್ಕಳುಳ್ಳವನು (ವಿಷ್ಣು); ಕುಸುಮಯುಕ್ತವಾದ + ಅಂಜಲಿ-ಕುಸುಮಾಂಜಲಿ (ಉ. ಮ. ಕ. ಧಾ.)-ಹೂಗಳಿಂದ ಕೂಡಿದ ಬೊಗಸೆ.

(೨೭೦) ಲೋಕಗಳ ತ್ರಯ-ಲೋಕತ್ರಯ (ಷ.ತ.); ಲೋಕತ್ರಯದ ಕೃಪಾಕರ (ಷ ತ) ಜಗತ್ + ಮಯ-ಜಗನ್ಮಯ (ಅನುನಾಸಿಕ ಸಂಧಿ)

(೨೭೧) ಅಂಬು-ನೀರಿಗೆ, ನಿಧಿ-ಆಶ್ರಯವಾದುದು-ಅಂಬುನಿಧಿ (ಸಮುದ್ರ;) ಪ್ರಸಾದಸ್ನಿಗ್ಧ ಮುಖಕಮಲ-ಪರಿಶುದ್ಧವಾಗಿಯೂ ಸ್ನೇಹಸೂಚಕವಾಗಿಯೂ ಇರುವ ಮುಖಪದ್ಮವುಳ್ಳ; ಅಮರ-ಮರಣ ವಿಲ್ಲದವರು (ದೇವತೆಗಳು).

ಎದ್ದು ಬಿನ್ನೈಸಿದನು ಕಮಲದ ।
ಗದ್ದುಗೆಯ ಪರಮೇಷ್ಠಿ ದೈತ್ಯವಿ ।
ಮರ್ದನನೆ ಚಿತ್ತಾವಧಾನ ಕೃಪಾಬ್ಧಿಯವಧಾನ ॥
ತಿದ್ದಿತೆಮ್ಮಯ ದೆಸೆ ದಶಾನನ ।
ನುದ್ದುರುಟು ತನದಿಂದ ನಾವ್ ಬಂ ।
ದಿದ್ದ ಹದನಿದು ಜೀಯ ರಕ್ಷಿಸಬೇಹುದೆಮಗೆಂದ ॥ ೧೭೨ ॥

ಶಿಶು ವಿದೀ ಜಗವೀ ಜಯತ್ರಯ ।
ನಸಿಯುತಿದೆ ಬಾಲ್ಯದಲಿ ಸರ್ವರ ।
ಕ್ಷಿಸುವ ದೇವರ ಕಾಣೆನಖಿಳಾವಮ್ನಾಯ ದೃಷ್ಟಿಯಲಿ ॥
ಉಸಿರಲಮ್ಮೆನು ಜೀಯ ಸುರರಾ ।
ಯಸವ ಚಿತ್ತವಿಸುರ್ವರೆಯಲು ।
ಬ್ಬಸವನವಧರಿಸೆಮಗೆ ಬಂದಿಹ ವಿಧಿಯ ಕೇಳೆಂದ ॥ ೧೭೩ ॥

ಮರುಳುತನದಿಂದಾ ದಶಾಸ್ಯಗೆ ।
ವರವನಿತ್ತೆನು ದೇವ ತಾನದ ।
ಪರಿಹರಿಸುವೊಡಶಕ್ತ ಭಕ್ತಾಧೀನ ನೀನೆಂಬ ॥
ಬಿರುದು ಮೆರೆವುದು ಜೀಯ ಜೀವನ ।
ಹೊರೆಯಲರಿಯೆವು ವೈರಿ ದಶಕಂ ॥
ಧರನುಪದ್ರವದಲಿ ಕೃಪಾಂಭೋನಿಧಿಯೆ ಕೇಳೆಂದ ॥ ೧೭೪ ॥

ಬರೆಯ ಬಲ್ಲೆನು ಬರೆದ ಲಿಖಿತವ ।
ನೊರಸಲರಿಯೆನು ಜಗದ ಭಾಳಾಂ ।
ತರದಲೀ ಸಚರಾಚರದ ತತ್ಕರ್ಮ ಫಲವಿದಿದು ॥

(೧೭೨) ಪರಮೇಷ್ಠಿ-ಬ್ರಹ್ಮನು; ತಿದ್ದಿತು-ವ್ಯತ್ಯಾಸವಾಯಿತು, ದೆಸೆ-ಅವಸ್ಥೆಯು; ದೆಸೆ-ದ್ಭ. ದಶಾ-ತ್ಸ.; ಉದ್ದುರುಟುತನ-ತುಂಟತನ,

(೧೭೩) ನಸಿಯುತಿದೆ-ನಾಶವಾಗುತ್ತಿದೆ; ಆಮ್ನಾಯ-ವೇದ; ಅಖಿಳಾವಮ್ನಾಯ ದೃಷ್ಟಿಯಲಿ-ಪೂರ್ಣವಾದ ಜ್ಞಾನದೃಷ್ಟಿಯಿಂದ; ಅಮ್ಮೆನು-ಶಕ್ತನಲ್ಲ; ಆಯಸವ-ಆಯಾಸವನ್ನು; ಉರ್ವರೆಯಲಿ-ಭೂಮಿಯಲ್ಲಿ (ಭೂಮಿಗುಂಟಾಗಿರುವ); ಉಬ್ಬಸವನ್ನು-ಸಂಕಟವನ್ನು.

(೧೭೪) ಮರುಳುತನದಿಂದ-ಹುಚ್ಚುತನದಿಂದ (ಅವಿವೇಕದಿಂದ); ದಶ-ಹತ್ತು, ಆಸ್ಯ-ಮುಖಗಳುಳ್ಳವನು-ದಶಾಸ್ಯ (ರಾವಣ); ಜೀವನ ಹೊರೆಯಲು-ಬದುಕಿರಲು.

ಬರೆವೆ ಧ್ರುವನ ಲಲಾಟದಲಿ ಮುಳಿ ।
ದೊರಸಿ ಬಿಸುಟೆ ಹಿರಣ್ಯಕನ ನಿ ।
ರ್ಭರದ ಭಾಳಾಕ್ಷರವ ವಿಧಿಗೆ ವಿಧಾತೃ ನೀನೆಂದ ॥ ೨೭೫ ॥

ಸಿರಿಯರಸ ಚಿತ್ತೈಸು ಹರಸುವ ।
ಗೊರವನೀ ಶ್ರೀಕಂಠನೀ ಶಚಿ ।
ಯರಸ ಸೇವಕನೀ ಸಮೀರಣಸಖನು ಬಾಣಸಿಗ ॥
ಮರಳಿ ಮಾತೇನೀ ಯಮನು ಕಿಂ ।
ಕರನು ಮಿಕ್ಕಿನ ವರುಣ ವಾಯುಗ ।
ಳಿರವ ಚಿತ್ತೈಸಿದರೆ ಪರಿಹಾಸಕವಲೇ ಎಂದ ॥ ೨೭೬ ॥

ಹಸಿಯ ನಾಡಲಪೇನು ಗುರು ಜೋ ।
ಯಿಸನು ತುಂಬುರ ನಾರದರು ರಂ ।
ಜಿಸುವ ವೈಣಿಕರೀ ಮನೋಜ ವಸಂತರಾ ಖಳನ ॥
ಬೆಸನ ಮಾಡುವ ದೂತರೀ ರವಿ ।
ಶಶಿಗಳೊಪ್ಪುವ ದೀವಟಿಗರೆಲೆ ।
ಯಸುರಹರ ಚಿತ್ತೈಸುಪಾಧ್ಯರು ನಾವಲೇ ಎಂದ ॥ ೨೭೭ ॥

ಬಿಸಜಗರ್ಭನ ಬಿನ್ನಹಕೆ ಹರಿ ।
ನಸುನಗುತ ಕೃಪೆಯಲಿ ಕಟಾಕ್ಷದ ।
ರಸುಮೆಯನು ಸೂಸಿದನು ಸುರರ ವಿಷಾದ ರಜನಿಯಲಿ ॥

(೨೭೫) ಈ ಸಚರಾಚರದ ಜಗದ ಭಾಳಾಂತರದಲಿ ತತ್ಕರ್ಮ ಫಲವಿದಿದು ಬರೆ......ಯೆನು, ಎಂದನ್ವಯವು; ನಾನು ಅವರವರ ಕರ್ಮಾನುಸಾರವಾದ ಫಲಗಳನ್ನು ಲೋಕಕ್ಕೆ ವಿಧಿಸಬಲ್ಲೆನು, ವಿಧಿಸಿದುದನ್ನು ತಪ್ಪಿಸುವ ಸಾಮರ್ಥ್ಯವು ನನಗಿಲ್ಲ. ಇಲ್ಲದುದನ್ನು ಬರೆವುದಕ್ಕೂ ಇದ್ದುದನ್ನು ಕೆಡಿಸುವುದಕ್ಕೂ ನೀನೊಬ್ಬನೇ ಸಮರ್ಥನು, ಎಂದು ಬ್ರಹ್ಮನು ಹೇಳಿದನು; ವಿಧಿಗೆ ವಿಧಾತೃ-ಬ್ರಹ್ಮನಿಗೂ ಬ್ರಹ್ಮನು.

(೨೭೬) ಗೊರವ-ಹೊಗಳುಭಟ್ಟನು; ಸಮೀರಣ ವಾಯುವಿನ, ಸಖ-ಮಿತ್ರ (ಅಗ್ನಿ); ಬಾಣಸಿಗ-ಅಡಿಗೆಯವನು; ಇರವ-ಸ್ಥಿತಿಯನ್ನು.

(೨೭೭) ಜೋಯಿಸ-ತ್ಭ., ಜ್ಯೋತಿಷ್ಕ-ತ್ಸ.; ಬೆಸನ-ಅಪ್ಪಣೆ (ಸೇವೆ), ಉಪಾಧ್ಯರು-ಪಾಠ ಹೇಳಿ ಕೊಡುವವರು.

ನಸಿದಿರಕ್ಕುಡಿಸಿದಿರಿ ನೊಂದಿರಿ ।
ಜಸವಳಿದಿರನುಗೆಟ್ಟಿರಖಿಳಾ ।
ಯಸಕೆ ಸಂದಿರಿ ಸೈರಿಸಿದಿರಿನ್ನಂಜ ಬೇಡೆಂದ ॥ ೨೭೮ ॥

ಸರಸಿಜಾಸನ ಕೇಳು ಸಂದುದು ।
ವರವವಗೆ ನಿನ್ನಿಂದ ದನುಜಾ ।
ಮರ ಭುಜಂಗಮುಖ್ಯ ನಾನಾ ದೇವ ಯೋನಿಯಲಿ ॥
ಮರಣ ಭಯವಿಲ್ಲೆಂದು ನೊಂದಿರಿ ।
ಹಿರಿದು ನೀವವನಿಂದ ಮುಂದಣ ।
ಗರಿವಧಾ ಸಮಯಕ್ಕುಪಾಯವ ಕೇಳಿ ನೀವೆನ್ನ ॥ ೨೭೯ ॥

ನರರ ರೂಪಿಂಬಾವು ವಿಶ್ವಂ ।
ಭರೆಯೊಳವತರಿಸುವೆವು ನೀಂ ವಾ ।
ನರರ ರೂಪಿಂದುದಿಸುವುದು ಧರಣೀತಳಾಗ್ರದಲಿ ॥
ಧುರದೊಳಹಿತ ಖಳೋತ್ತಮನ ದು ।
ರ್ಧರದ ಶಿರಖಂಡನವನೆಮ್ಮಯ ।
ಸರಳ ಮೊನೆಯಲಿ ತೋರಿಸುವೆನಿದ ನಂಬಿ ನೀವೆಂದ ॥ ೨೮೦ ॥

ಎಂದವರ ಬೀಳ್ಕೊಡಲು ಚರಣ ।
ದ್ವಂದ್ವಕಾನತರಾಗಿ ಹರುಷದ ।
ಸಂದಣಿಯ ಸೌರಂಭದಲಿ ಬೀಳ್ಕೊಂಡರಾ ಹರಿಯ ॥
ಕಂದ ಕೇಳ್ಕೈ ಜಾಂಬವನ ರೂ ।
ಪಿಂದ ತೋರಿದನಬುಜಭವನು ಪು ।
ರಂದರನು ನೆಲೆಗೊಂಡನಂಗದನಂಗಶೋಭೆಯಲಿ ॥ ೨೮೧ ॥

(೨೭೮) ಬಿನ್ನಹ-ದ್ಭ., ವಿಜ್ಞಾಪನಾ-ತ್ಸ.; ರಸುಮೆ-ದ್ಭ., ರಶ್ಮಿ-ತ್ಸ.; ರಸುಮೆ-ಕಾಂತಿ; ವಿಷಾದ ರಜನಿಯಲಿ-ದುಃಖವೆಂಬ ರಾತ್ರಿಯಲ್ಲಿ (ಕತ್ತಲೆಯಲ್ಲಿ), ಸುರರ ಕಟಾಕ್ಷದ ಕಾಂತಿಯನು, ಸೂಸಿದನು-ಚೆಲ್ಲಿದನು; ಅಕ್ಕಡಿಸು-ಬಡವಾಗು; ಜಸ-ದ್ಭ., ಯಶಸ್-ತ್ಸ., ಜಸದಿಂ + ಅಳಿ-ಜಸವಳಿ (ಕ್ರಿ. ಸ)., ಜಸವಳಿದಿರಿ- ಅಪಕೀರ್ತಿಯನ್ನು ಹೊಂದಿದಿರಿ; ಅನುಗೆಟ್ಟಿರಿ-ದುಃಸ್ಥಿತಿಯನ್ನು ಪಡೆದಿರಿ; ಸಂದಿರಿ-ಸಿಕ್ಕಿದಿರಿ.

(೨೭೯) ಮುಂದಣಿ ಎಂಬ ರೂಪವು ಮುಂದಣಗೆ ಎಂದಾಗಿದೆ; ಅರಿವಧಾ ಸಮಯಕ್ಕೆ ಶತ್ರು ಸಂಹಾರ ಸಂದರ್ಭಕ್ಕೆ; ಎನ್ನ-ನನ್ನನ್ನು; ಇಲ್ಲಿ ಕರ್ಮಾರ್ಥದಲ್ಲಿ ಷಷ್ಠಿ.

(೨೮೦) ವಿಶ್ವಂಭರೆ-ಭೂಮಿ; ನೀಂ-ನೀವು; ಅಹಿತ ಖಳೋತ್ತಮನ-ಬಲಿಷ್ಠನಾದ ನೀಚ ಶತ್ರುವಿನ; ದುರ್ಧರದ= ಅಸಾಧ್ಯವಾದ; ಸರಳ-ಬಾಣದ.

(೨೮೧) ಚರಣಗಳ + ದ್ವಂದ್ವ-ಚರಣದ್ವಂದ (ಷ. ತ.); ಆನತರಾಗಿ-ನಮಸ್ಕರಿಸಿ; ಪುರಂದರ-ಇಂದ್ರ; ಅಂಗಶೋಭೆಯಲಿ-ದೇಹಕಾಂತಿಯಿಂದ (ದೇಹವನ್ನು ಧರಿಸಿ).

ತರಣಿ ಸುಗ್ರೀವಾಭಿಧಾನವ ।
ಧರಿಸಿ ಜನಿಸಿದನೀ ಚರಾಚರ ।
ಭರಿತ ಭುವನಪ್ರಾಣನಾ ಹನುಮಂತ ರೂಪದಲಿ ॥
ಧರಣಿಯಲಿ ಮೈದೋರಿದನು ಶಂ ।
ಕರನು ವೃಷಭಾಕಾರದಲಿ ಗೋ ।
ಚರಿಸಿದನು ಸುರರಾಜವರ್ಧಕಿ ಬಳಿಕ ನಳನಾಗಿ ॥ ೨೮೨ ॥

ಪವನ ಬಾಂಧವ ನೀಲ ನಾಮ ।
ಪ್ರವರದಲಿ ಜನಿಸಿದನು ಮೈಂದ ।
ದ್ವಿವಿದರಾದರು ಸುರ ಯಮಳರಗ್ಗದ ಪರೇತ ಪತಿ.॥
ಗವಯ ಗಜ ಶರಭಾದಿ ಪಂಚ ।
ಪ್ಲವಗ ರೂಪಿಂದುದಿಸಿದನು ಸಂ ।
ಭವಿಸಿ ಧನ್ವಂತರಿ ಸುಷೇಣಕನಾದನವನಿಯಲಿ ॥ ೨೮೩ ॥

ಉಳಿದ ಸುರಸಂದೋಹ ನಾನಾ ।
ಜಳಧಿಮಧ್ಯ ದ್ವೀಪ ಕುಹರಂ ।
ಗಳಲಿ ಕುಧರಾವಳಿಗಳಲಿ ಬಹು ಕಾನನಂಗಳಲಿ ।
ಬಳಿಕ ಬಲಿಮುಖ ರೂಪುಗಳ ನೆರೆ ।
ತಳೆದರಾಳ್ದನ ನೇಮದಲಿ ಕೇ ।
ಳಿಲೆ ಕಕುಸ್ಥಜ ಸೂನು ಹರಿಲೀಲಾ ವಿನೋದವನು ॥ ೨೮೪ ॥

ಮಾಯೆ ಮಂಥರೆಯಾಗಿ ದಶರಥ ।
ರಾಯ ಭವನವ ಸಾರಿದಳು ಫಣಿ ।
ರಾಯ ಲಕ್ಷ್ಮಣನಾಗಿ ಜನಿಸಿದನಿಂದಿರಾವನಿತೆ ॥

(೨೮೨) ಅಭಿಧಾನ-ಹೆಸರು; ಭುವನ - ಲೋಕಕ್ಕೆ, ಪ್ರಾಣ - ಜೀವಸ್ವರೂಪನಾದವನು (ವಾಯು); ವೃಷಭಾಕಾರದಲಿ-ವೃಷಭನೆಂಬ ಕಪಿಯಾಗಿ; ಸುರರಾಜ ವರ್ಧಕಿ-ಇಂದ್ರನ ಬಡಗಿಯುವನಾದ ವಿಶ್ವಕರ್ಮನು; ವರ್ಧಕಿ-ತ್ಸ. ಬಡಗಿ-ದ್ಭ.

(೨೮೩) ಪವನ ವಾಯುವಿನ, ಬಾಂಧವ-ಮಿತ್ರನು (ಅಗ್ನಿ); ನಾಮ ಪ್ರವರ-ಶ್ರೇಷ್ಠವಾದ ಹೆಸರು; ಸುರ ಯಮಳರು-ಅಶ್ವಿನೀ ದೇವತೆಗಳಿಬ್ಬರು; ಪರೇತ-ಶವಗಳ, ಪತಿ-ಒಡೆಯ (ಯಮ).

(೨೮೪) ಕುಹರ- ಮಧ್ಯಭಾಗ; ಕು-ಭೂಮಿಯನ್ನು, ಧರ- ಹೊತ್ತಿರುವುದು, ಕುಧರ (ಬೆಟ್ಟ); ಬಲಿಮುಖ-ಕಪಿ; ಆಳ್ದನ-ಒಡೆಯನಾದ ವಿಷ್ಣುವಿನ.

ರಾಯ ಜನಕನ ಮಗಳೆನಿಸಿ ವಸು ।
ಧಾಯುವತಿಯಿಂದುದಿಸಿದಳು ನಾ ।
ರಾಯಣನು ರೂಹಿಸಿದನನುಪಮ ರಾಮನಾಮದಲಿ ॥ ೨೮೫ ॥

ಇದು ಕಣಾ ಜಗದೀಶ್ವರನ ಜವ ।
ನದ ಜಗದ್ವ್ಯಾಪಾರ ಜವನಿಕೆ ।
ಯುದಿಸಿ ತೋರಿಸನೆಂಬುದಿದು ಮಿಥ್ಯಾಪ್ರಪಂಚವಲೆ ॥
ತುದಿ ಮೊದಲು ನಡುವೆಂಬ ಲಯುದ ।
ಭ್ಯುದಯವೆಂಬ ವಿಕಾರಗಳು ಪೋ೦ ।
ಕದ ಸನಾತನಗಾಯ್ತು ಲೀಲೆ ಮನುಷ್ಯರೂಪಿನಲಿ ॥ ೨೮೬ ॥

ಒಡಲೊಳಬುಜ ಭವಾಂಡ ಕೋಟಿಯ ।
ನಡಗಿಸಿರ್ಪ ಮಹಾಮಹಿಮಗಾ ।
ಯ್ತಡಕ ತೊಟ್ಟಿಲೊಳಮಳ ನಿಗಮಾಳಿಗಳು ಬೆರಗಾಗೆ ॥
ಮುಡಿಗಗೋಚರದಮಳ ಬೊಮ್ಮದ ।
ಕಡುಹುನಿಂದುದು ಜೋಗುಳದಲವ ।
ಗಡದ ದೇವತ್ವಕೆ ಶಿಶುತ್ವದೊಳಾಯ್ತು ನಿರ್ವಾಹ ॥ ೨೮೭ ॥

ಎತ್ತ ಹೋದುದೊ ಹಸಿವು ತೃಷೆ ಹೊಗ ।
ದುತ್ತಮದ ಮಹಿಮಾತಿಶಯ ಹಸಿ ।
ದತ್ತು ಮೊಲೆವಾಲಿಂಗೆ ಸೊಗಸುವುದಿದು ವಿಚಿತ್ರವಲ ॥
ಎತ್ತಲುರ್ವರೆಗಹಿಪತಿಗೆ ವಿಹ ।
ಗೋತ್ತಮಂಗರಿದೆನಿಸಿಕೊಂಬನ ।
ನೆತ್ತಿದರು ವನಿತೆಯರು ಬೆರಗೇನಲ್ಲವೇ ಎಂದ ॥ ೨೮೮ ॥

(೨೮೫) ಘಾಯ-ಕಪಟವೇಷ, ಅನೇಕ ಕೃತ್ಯ-ಘಾತಿ (ಹಲ್ಲೆ); ಇಂದಿರಾ ವನಿತೆ-ಲಕ್ಷ್ಮೀದೇವಿಯು ವಸುಧಾ ಯುವತಿ-ಭೂಮಿಯೆಂಬ ಸ್ತ್ರೀ; ರೂಹಿಸಿದನು-ತೋರಿಸಿದನು; ರೂಪಿಸು ಎಂಬುದರ ರೂಪಾಂತರ-ರೂಹಿಸು.

(೨೮೬) ಜವನಿಕೆ-ತೆರೆ (ಗುಬ್ಬ); ಜವನಿಕೆ-ದ್ಭ. ಯವನಿಕಾ-ತ್ಸ. ಮಿಥ್ಯಾಪ್ರಪಂಚ-ವಿಸ್ತಾರವಾದ ಸುಳ್ಳು; ಸನಾತನಗೆ-ಪುರಾಣ ಪುರುಷನಿಗೆ (ಅನಾದಿಸಿದ್ಧ).

(೨೮೭) ಅಡಕೆ-ಅಡಗಿಕೊಂಡಿರುವಿಕೆ; ನಿಗಮಾಳಿ-ವೇದಸಮೂಹ; ಅಮಳ ಚಿನ್ಮಾತ್ರ-ನಿರ್ಮಲವಾದ ಬ್ರಹ್ಮವಸ್ತುವಿನ; ಕಡುಹು-ಶೌರ್ಯವು; ಅಗಡದ-ಅಸಾಧ್ಯವಾದ; ನಿರ್ವಾಹ-ಪರಿಣಾಮ.

(೨೮೮) ತೃಷೆ ಹೊಗದ-ಬಾಯಾರಿಕೆಯುಬಾಧೆಯಿಲ್ಲದ, ಉರ್ವರೆಗೆ-ಭೂಮಿಗೆ; ವಿಹ-ಆಕಾಶದಲ್ಲಿ, ಗ-ಸಂಚರಿಸುವುವು-ವಿಹಗ (ಪಕ್ಷಿ), ಅವುಗಳಲ್ಲಿ, ಉತ್ತಮ-ಶ್ರೇಷ್ಠ (ಗರುಡ)

ಜಲರುಹಾಸನ ಮುಖ್ಯ ದಿವಿಜಾ ।
ವಳಿಗಳಿಂದೋಲೈಸಿಕೊಂಬ ।
ಗ್ಗಳದ ವಿಭವದ ದೈವವಾ ನರವಿಭುವಿನೋಲಗದ ॥
ಕೆಳದಿಯರ ಕೈಸನ್ನೆಗಳ ವೈ ।
ವಳಿಯ ಮಾತಿಂಗೇಳ್ವ ಕುಳ್ಳಿರು ।
ವಳವಡಿಕೆ ಬಲ್ಲರಿಗೆ ಬೆರಗೇನಲ್ಲವೇ ಎಂದ ॥ ೨೮೯ ॥

ನೆಲವನಳೆವಂದೀ ಮಹಾ ದಿಗು ।
ವಳಯವೀ ಕುಲಪರ್ವತಗಳೀ ।
ಜಳನಿಧಿಗಳೀ ಗಗನವೀ ಬ್ರಹ್ಮಾಂಡ ಹವಣಿಸದ ॥
ವಿಳಸಿತದ ವಿಭುವಿಂಗೆ ದಟ್ಟಡಿ ।
ಬಳಿಕುನಡೆ ಮೆಲ್ನಡೆಗಳೆಂಬಿವು ।
ತಿಳಿವವರ ಮನಸಿಂಗೆ ಮರೆಮಾತಲ್ಲವೇ ಎಂದ ॥ ೨೯೦ ॥

ಜಗದ ಜೀವರ ಯಂತ್ರಮಯದೂ ।
ಹೆಗಳಿನಾಡಿಸಿ ತೋರ್ಪ ನಾಟಕ ।
ಮಗುವತನದಲಿ ಬಾಲಕರ ಕೇಳೀ ಕಲಾಪದಲಿ ॥
ಸೊಗಸುವುದು ಸೋಜಿಗವಲಾ ಶ್ರುತಿ ।
ನಗುವುದಕೆ ಸಂದೇಹವೇನೆಲೆ ।
ಮಗನೆ ಮಾಯಾಚರಿತ ಸೊಬಗೇನಲ್ಲವೇ ಎಂದ ॥ ೨೯೧ ॥

ಆದಿ ಬೊಮ್ಮಕೆ ಮಗುವತನ ಸಂ ।
ಪಾದಿಸಿತ್ತೆಂಬುದು ಮೃಷಾ ಪರಿ ।
ವಾದವಿದು ಬಲ್ಲವರಿಗಜ್ಞರ ಮಾತದಂತಿರಲಿ ॥

(೨೮೯) ಸನ್ನೆ-ದ್ಭ., ಸಂಜ್ಞಾ-ತ್ಸ.; ವೈವಳಿಯು-ಅಂಗಚೇಷ್ಟೆಯು; ಅಳವಡಿಕೆ-ಸಿದ್ಧವಾಗಿರುವಿಕೆ; ಬಲ್ಲರಿಗೆ-ಜ್ಞಾನಿಗಳಿಗೆ; ಬೆರಗು-ಆಶ್ಚರ್ಯವು.

(೨೯೦) ಹವಣಿಸದ-ಸಾಲದೆ ಹೋಗಿದ್ದ (ಚಿಕ್ಕದೆಂದೆನಿಸಿದ್ದ); ದಟ್ಟು+ಅಡಿ-ದಟ್ಟಡಿ (ಹತ್ತಿರ ಹತ್ತಿರವಾಗಿ ಹೆಜ್ಜೆಯಿಡುವುದು; ಬಳಿಕು ನಡೆ-ಬಳುಕುವಂತೆ ನಡೆವುದು; ಮರೆವ+ಮಾತು-ಮರೆಮಾತು. (ಗಮಕ.)-ಸುಳ್ಳು.

(೨೯೧) ಜೀವರ-ಪ್ರಾಣಿಗಳನ್ನು, ಇಲ್ಲಿ ಕರ್ಮಾರ್ಥದಲ್ಲಿ ಷಷ್ಠಿ; ಯಂತ್ರಮಯದ ಊಹೆಗಳಿಂ-ಕೀಲುಬೊಂಬೆಗಳ ರೀತಿಯಿಂದ; ಕಲಾಪದಲಿ-ಸಮೂಹದಲ್ಲಿ; ಮಾಯಾಚರಿತ-ಮೋಸದ ನಡೆವಳಿಕೆ (ಕಪಟ ನಾಟಕವು).

ಮೇದಿನಿಯ ಭಾರಾಪಹರಣ ವಿ ।
ನೋದವಿದು ಮಾಯಾ ಪ್ರಪಂಚದ ।
ಹಾದಿಗರಿಗಿದು ಸಿದ್ಧವೆಂದೇ ತೋರುತಿಹುದೆಂದ ॥ ೨೯೨ ॥

ಅರಿಯ ಬಂದುದೆ ನಿಮಗೆ ಮಾಯೆಯ ।
ಮರೆಯ ಮಾನವನೆಂದು ಮುಗುಳಂ ।
ತರಿಸಲಿಲ್ಲವಲೇ ಮನಸ್ಸಿನ ಸಂಶಯದ ಬೀದಿ ॥
ತೆರಹುಗೊಟ್ಟಿತೆ ನಿಮಗೆನಲುಪದ ।
ಕೆರಗಿದರು ಭಕ್ತಿಯಲಿ ಮುನಿ ಬಳಿ ।
ಕುರುವ ರಘುರಾಜೇಂದ್ರ ಚರಿತವ ಕೇಳಲನುಗೈದ ॥ ೨೯೩ ॥

ಹೊಳೆಹೊಳೆವ ನಿಡುಗಂಗಳಿನ ಥಳ ।
ಥಳಿಪ ಕದಪಿನ ಕೋಮಲಾಧರ ।
ಎಳನಗೆಯ ಬಾಯ್ದೆರೆಯ ಮಿರುಗುವ ದಂತ ಪಙ್ಕ್ತಿಗಳ ॥
ಸುಳಿಗುರುಳ ಸೊಂಪೊಗೆವ ನೀಲೋ
ತ್ಪಲ ನಿಭಾಂಗದ ಮುದ್ದು ವದನದ ।
ಚಲುವ ದೇವರ ದೇವನೆಸೆದನು ಬಾಲಕೇಳಿಯಲಿ ॥ ೨೯೪ ॥

ದಿವಸ ದಿವಸಕೆ ಬಾಲಶಶಿ ಪೆ ।
ಚ್ಚುವವೊಲನುಜರು ಸಹಿತ ಲಕ್ಷ್ಮೀ ।
ಧವನು ಹೆಚ್ಚಿದನಿಳೆಯ ನಾಡಾಡಿಗಳ ನರನಂತೆ ॥
ಅವನಿಜಾಸುತ ಕೇಳು ಮಹದು ।
ತ್ಸವದಲುಪನಯನ ಪ್ರಪಂಚಗ ।
ಳವರಿಗಾದುವು ವಿದಿತ ಲೌಕಿಕ ವೈದಿಕಂಗಳಲಿ ॥ ೨೯೫ ॥

(೨೯೨) ಸಂಪಾದಿಸಿತ್ತು-ಪ್ರಾಪ್ತವಾಯ್ತು; ಮಾಯಾಪ್ರಪಂಚ-ಸಂಸಾರದ ಪ್ರವಾಹವು; ಹಾದಿಗರಿಗೆ-ಮಾರ್ಗದಲ್ಲಿ ನಡೆವವರಿಗೆ; ಸಿದ್ಧಪ-ಸಿದ್ಧವು.

(೨೯೩) [illegible] ತೆರಹುಗೊಟ್ಟಿತೆ-ಅವಕಾಶವನ್ನು ಕೊಟ್ಟಿತೇ; ಉರುವ-ಶ್ರೇಷ್ಠವಾದ; ಅನುಗೈದ-ಪ್ರಾರಂಭಿಸಿದನು.

(೨೯೪) ನಿಡಿದು + ಕಂಗಳು-ನಿಡುಗಂಗಳು (ವಿ. ಪೂರ್ವ. ಕ.); ಬಾಯ್ದೆರೆ-ತುಟಿ; ಸುಳಿಗು [illegible] ನೀಲೋತ್ಪಲನಿಭ-ಕನ್ನೈದಿಲೆಗೆ ಸಮಾನವಾದ; ಮುದ್ದು-ದ್ಬ., ಮುಗ್ಧ-ತ್ಸ.; ಉತ್ಪಲ-ತ್ಸ.; ಉಪ್ಪಳ-ದ್ಬ.

(೨೯೫) ಲಕ್ಷ್ಮೀಧವ-ಲಕ್ಷ್ಮಿಗೆ ಪತಿ; ನಾಡಾಡಿ-ಸಾಮಾನ್ಯ ಮನುಷ್ಯರ; ನರನಂತೆ-ಮಗನ ಹಾಗೆ; ಉಪ-ಸಮೀಪಕ್ಕೆ, ನಯನ (ಉಪದೇಶಮಾಡಲು) ಕರೆದು ಕೊಳ್ಳುವುದು-ಉಪನಯನ.

ಮೇಲೆ ನಿರುಪಮ ವೇದಶಾಸ್ತ್ರ ವಿ ।
ಶಾಲ ವಕ್ತ್ರಗಳಾದರಲ್ಲಿಂ ।
ಮೇಲನುಗ್ರಹವಾಯ್ತು ಮುನಿಪ ವಸಿಷ್ಠನಿಂ ಬಳಿಕ ॥
ನಾಲುವರು ನಂದನರಿಗವನೀ ।
ಪಾಲ ತೇಜೋರಾಶಿ ಮಿಗೆ ಸ ।
ಮ್ಮೇಳವಿಸಿದುದು ಮೆರೆದುದವರಭ್ಯುದಯ ದಿನದಿನಕೆ ॥ ೨೯೬ ॥

ವರುಷ ಹದಿನಾರರಲಿ ಗಜ ರಥ ।
ತುರಗದೇರಾಟದಲಿ ಗದೆ ಮು ।
ದ್ಗರ ಕೃಪಾಣ ಶರಾಸನಾದಿ ಸಮಸ್ತ ಶಸ್ತ್ರದಲಿ ॥
ಸರಿ ಸುರೋರಗ ನರರೊಳಿಲ್ಲೆಂ ।
ಬುರುತರ ಪ್ರೌಢಿಗಳಲುಬ್ಬಿಸಿ ।
ದರು ಪುರಂದರ ರಾಜತೇಜದೊಳಖಿಳ ಜನ ಮನವ ॥ ೨೯೭ ॥

(೨೯೬) ಅವನೀ ಪಾಲ ತೇಜೋರಾಶಿ-ಕ್ಷಾತ್ರ ತೇಜಸ್ಸು, ಸಮ್ಮೇಳವಿಸಿದುದು-ಹೆಚ್ಚಿತು; ಅಭ್ಯುದಯ-ಅಭಿವೃದ್ಧಿ.

(೨೯೭) ಮುದ್ಗರ-ಕಬ್ಬಿಣವನ್ನು ಬಡಿವಚಾಣ; ಕೃಪಾಣ-ಕತ್ತಿ, ಶರ-ಬಾಣವನ್ನು, ಅಸನ-ಪ್ರಯೋಗಿಸುವುದು-ಬಾಣಾಸನ (ಬಿಲ್ಲು).

---

